# ಕಲ್ಪನಾ ವಿಲಾಸ

ಶ್ರೀ ಪಿ. ವೇಣುಗೋಪಾಲ



ಆನಂದ ಗ್ರಂಥಮಾಲಾ

ಹುಬ್ಬಳ್ಳಿ

ವರುಷ ೩ ಕುಸುಮ ೪

# ಕಲ್ಪನಾ ವಿಲಾಸ

(ಸಣ್ಣ ಕತೆಗಳ ಸಂಕಲನ)



ಶ್ರೀ ಸಿ. ವೇಣುಗೋಪಾಲ



ಆನಂದ ಗ್ರಂಥ ಮಾಲಾ
ಹುಬ್ಬಳ್ಳಿ

ಆಗಸ್ಟ ೧೯೪೩

ಸಾದಾ ಪ್ರತಿ ೦-೧೨-೦
ಉತ್ತಮ ಪ್ರತಿ ೧-೮-೦

ಸಲಹೆಗಾರರು ·

ಶ್ರೀ ಎಸ್. ಆರ್. ಮಳಗಿ, ಎಂ ಎ ಬಿ. ಟಿ.

ಶ್ರೀ ಎನ್. ಕೆ ಕುಲಕರ್ಣಿ, ಎಂ ಎ ಬಿ ಟಿ

ಶ್ರೀ ಆರ್ ವ್ಹಿ. ಕುಲಕರ್ಣಿ, ಎಂ ಎ ಬಿ ಟಿ

ಶ್ರೀ. ದೇಸಾಯಿ ದತ್ತಮೂರ್ತಿ

ಸಂಪಾದಕರು :

ಶ್ರೀ. ಪಿ. ವೆಂಕೋಬಾಚಾರ್ಯ, ಬಿ. ಎ. ಬಿ. ಟಿ.



● ಮಾಲೆಯ ೫ ನೆಯ ಪುಸ್ತಕ ●

| | | | |
|---|---|---|---|
| ಪ್ರವಾದಿ | [ಖಲೀಲ್ ಗಿಬ್ರಾನರ ಪ್ರೊಫೆಟ್] | ಸಾ | ೧-೮-೦ |
| | | ಉ | ೨-೦-೦ |

× ಮಾಲೆಯ ಬಿಡಿ ಮುತ್ತುಗಳು ×

| | | |
|---|---|---|
| ಕವನ ಸಂಗ್ರಹ | ಶ್ರೀಧರ ಖಾನೋಳಕರ್ | ೧-೦-೦ |
| ಗಾಯದ ನೋವು | [ಮೋಪಾಸಾನ ಕತೆಗಳು-೨] | ೧-೪-೦ |
| ವಿಧಿ ತಂದ ವಧು | [ಕಾದಂಬರಿ] ಪಿ. ವಿ ಆಚಾರ್ಯ | ೧-೪-೦ |



ಮುದ್ರಕರು

ಕೆ. ಜಿ. ತಾಪಸ, ಬಿ ಎ

ಒಡೆಯರು ಸುಧಾ ಪ್ರೆಸ್, ಹುಬ್ಬಳ್ಳಿ.

ಪ್ರಕಾಶಕರು

ಪಿ. ವ್ಹಿ. ಆಚಾರ್ಯ & ಕಂ

೬೦೬೦ ಗವಳೀಗಲ್ಲಿ, ಹುಬ್ಬಳ್ಳಿ.

## ನನ್ನ ನುಡಿ

ಭಾಷಾಂತರ ಸಾಹಿತ್ಯವನ್ನೊದಗಿಸಬೇಕೆಂಬ ಆದರ್ಶವನ್ನಿಟ್ಟುಕೊಂಡು ಪುಸ್ತಕ ಪ್ರಚುರಣಕ್ಕೆ ನಿಂತ ಆನಂದ ಗ್ರಂಥ ಮಾಲೆಯ ಒಂದು ಕುಸುಮ ವಾಗಿ ನನ್ನ ಈ **"ಕಲ್ಪನಾ ವಿಲಾಸ"** ವು ಕಲ್ಪನೆಯ ಕನಸಿನಿಂದ ನನಸಾಗಿ ಬಂದು ನಿಂತಿದೆ ಇದಕ್ಕೆ ನಾನು ಸಂಪಾದಕರಿಗೆ ಚಿರಋಣಿ ಅನುವಾದ ಅಥವಾ ಇತರ ಭಾಷಾ ಸಾಹಿತ್ಯದ ಕೃತಿಗಳ ಆಧಾರದ ಮೇಲಿಂದ ಬರೆದ ಪುಸ್ತಕಗಳೆಂದರೆ ಮೂಗುಮುರಿಯುವವರಿಗೆ ಆನಂದ ಗ್ರಂಥ ಮಾಲೆಯ ಕೃತಿ ಗಳೆ ಸರಿಯಾದ ಮಾರುತ್ತರವನ್ನಿತ್ತಿವೆಯೆಂದರೆ ಅತಿಶಯೋಕ್ತಿ ಆಗಲಾರದು

ನನ್ನ ಸಾಹಿತ್ಯ ಚಟುವಟಿಕೆಗಳಲ್ಲಿ ಆದ ಅನುಭವದ ಎಳೆಯನ್ನೇ "ಅನುಭವದ ಕಥೆ" ಗೆ ಹಿನ್ನೆಲೆಯಾಗಿಸಿದೆ ಇದರಲ್ಲಿ ಕೆಲವು ಕತೆಗಳ ಮೂಲ ನನ್ನ ಜೀವನದಲ್ಲಿಯ ಅನೇಕ ಸನ್ನಿವೇಶಗಳೆಂದನ್ನಬಹುದು. ಇನ್ನಿತರ ಕತ ಗಳಲ್ಲಿ ತಮಿಳು ಕತಗಳ ಛಾಯೆಯೂ ಇದೆ "ಜಯಳ ಓಲೆಗಳು" ಎಂಬ ಕತೆಗೆ ಬೆಳಗಾಂವಿಯ ನನ್ನ ಎರಡು ವರುಷಗಳ ಜೀವನ ವಸ್ತುವನ್ನು ದೊರ ಕಿಸಿ ಕೊಟ್ಟಿದೆಯೆಂದು ಹೇಳಬಯಸುತ್ತೇನೆ

ವೇಲೂರಿನಲ್ಲಿ ನನ್ನ ವಿದ್ಯಾಭ್ಯಾಸದ ಮೂಲಕ ತೆಲುಗು, ತಮಿಳು ಚೆನ್ನಾಗಿ ಕಲಿತೆ ಹುಬ್ಬಳ್ಳಿಯ ಸಾಹಿತ್ಯ ವಾತಾವರಣ ನನ್ನ ಈ ಅಭಿರುಚಿಗೆ ಪುಷ್ಟಿಕೊಟ್ಟಿತು ಮನೆಯಲ್ಲಿಯ ನನ್ನ ಹಿರಿಯರ ನೆರವಿನಿಂದ ಕನ್ನಡ ಹೊಸ ಸಾಹಿತ್ಯದ ಅಭ್ಯಾಸ, ಸತತ ಹಿರಿಯ ಸಾಹಿತಿಗಳೊಂದಿಗೆ ಆದ ಪರಿಚಯ ನನ್ನ ಕೃತಿಗಳನ್ನು ಪ್ರಕಟಿಸಿದ "ಭಾರತಿ" "ಉಷಾ" "ಜಯಹಿಂದ" 'ಸುಬೋಧ" "ಜಯಕರ್ನಾಟಕ" "ಪ್ರಜಾಮತ" ಪತ್ರಿಕೆಗಳ ಪ್ರೋತ್ಸಾಹ, ಮುಂತಾದವು ಗಳೇ ನನ್ನನ್ನು ಬರಹಗಾರನಾಗಿಸಿತು ಅವರ ಆಶೀರ್ವಾದವೇ ನನಗೆ ಬಲ

ಈ ಕಥಾಸಂಕಲನವು ಕನ್ನಡ ದೇವಿಯ ಪದಕಮಲದಲ್ಲಿ ನನ್ನ ಮೊದಲ ಕಾಣಿಕೆ ಮನೋರಂಜನೆ ಮತ್ತು ಮಾರ್ಗದರ್ಶನ ಇವುಗಳು ಲಲಿತ ಸಾಹಿ ತ್ಯದ ಮುಖ್ಯ ಗುರಿಗಳೆಂದು ನನ್ನ ಭಾವನೆ. ಇವುಗಳನ್ನು ಸ್ವಲ್ಪ ಮಟ್ಟಿಗಾ ದರೂ ನೀವು ಈ ಪುಸ್ತಕದಲ್ಲಿ ಕಾಣುವಿರೆಂದು ತಿಳಿಯುತ್ತೇನೆ ನನ್ನ ಜನ್ಮಕ್ಕೆ ಕಾರಣರಾದ ಮತ್ತು ಸಾಹಿತ್ಯಪ್ರಿಯರಾದ ನನ್ನ ಮಾತಾಪಿತೃಗಳ ಪಾದದಲ್ಲಿ ಈ ಮೊದಲ ಪುಷ್ಪವನ್ನು ಅರ್ಪಿಸುತ್ತೇನೆ.

ಹುಬ್ಬಳ್ಳಿ
೧-೮-೫೩ } **ಪಿ. ವೇಣುಗೋಪಾಲ**

# ಸಂಪಾದಕರ ಮಾತು.



ಈ ತರುಣ ಸಾಹಿತಿಗಳಾದ ಶ್ರೀ ಪಿ ವೇಣುಗೋಪಾಲರು ಸಾಹಿತ್ಯ ಕ್ಷೇತ್ರದಲ್ಲಿ ಈಗ ನಾಲ್ಕು ವರುಷಗಳಿಂದ ಕತೆ-ಲೇಖನಗಳನ್ನು ಬರೆಯುತ್ತ ಕನ್ನಡಗರಿಗೆ ಪರಿಚಿತರಾಗಿದ್ದಾರೆ ಇವರ "ಕಲ್ಪನಾ ವಿಲಾಸ"ದಲ್ಲಿ ಪ್ರಕಟವಾದ ಅನೇಕ ಕತೆಗಳನ್ನು, ನಮ್ಮ ಸಾಹಿತ್ಯಮಿತ್ರರೂ, ವಿಮರ್ಶಕರೂ, ಒಳ್ಳೆಯವಾಗಿವೆಯೆಂದು ಅಭಿಪ್ರಾಯಪಟ್ಟಿದುದರಿಂದ, ಈ ಸಂಕಲನವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಿದ್ದೇವೆ ಇದರ ಸ್ಥಾನಮಾನವನ್ನು ತೂಗಿ ಅಭಿಪ್ರಾಯ ಸೂಚಿಸಲು ಸಹೃದಯ ಓದುಗರಿಗೂ, ಬಲ್ಲ ವಿಮರ್ಶಕರಿಗೂ ಬಿಟ್ಟುಕೊಟ್ಟಿದ್ದೇವೆ ಕತೆಗಾರರಿಗೆ ಮಾಲೆಯು ಚಿರರುಣಿಯಾಗಿದೆ ನಮ್ಮ ಮಾಲೆಯ ಕಡೆಯ ಕುಸುಮ "ಪ್ರವಾದಿ''ಯನ್ನು, ನವೆಂಬರದಲ್ಲಿಯೂ, ಕವಿವರ್ಯ ಶ್ರೀಧರ ಖಾನೋಳಕರರ ಕವನಸಂಗ್ರಹವನ್ನು ಬಿಡಿಮುತ್ತಾಗಿ ಡಿಸೆಂಬರದಲ್ಲಿಯೂ ಪ್ರಕಟಿಸುವೆವೆಂಬ ಭರವಸೆಯಿಂದ ಈ ಮಾತು ಮುಗಿಸುತ್ತೇವೆ

ಹುಬ್ಬಳ್ಳಿ }
೧—೮—೪೩ }

ಪಿ. ವೆಂಕೋಬಾಚಾರ್ಯ
ಸಂಪಾದಕರು



# ಪ್ರೀತಿಯ ಪರಿ



**ಗೋ**ಧೂಳಿ ಲಗ್ನಕ್ಕೆ ಸರಿಯಾಗಿ ರಾಧೆಯ ಕೊರಳಿನಲ್ಲಿ ತಾಳಿಯನ್ನು ಕಟ್ಟಿದೆ ಅವಳ ಕೈಹಿಡಿದು ಅಗ್ನಿ ಸಾಕ್ಷಿಯಾಗಿ ಮದುವೆಯಾದೆ. ಹೊರಗೆ ವಿಶಾಲ ಮಂಟಪದಲ್ಲಿ ಸಂಗೀತ ಕಾರ್ಯಕ್ರಮದ ಏರ್ಪಾಟುಗಳು ನಡೆದಿದ್ದವು

ಗಾಯಕಿಯು, ಅವಳಿಗಾಗಿ ನಿರ್ಮಿಸಿದ ಗದ್ದುಗೆಯ ಮೇಲೆ ಕುಳಿತು ಪಕ್ಕ ವಾದ್ಯಗಳನ್ನು ಸರಿಪಡಿಸಿಕೊಂಡಳು. ನಾನು ಎಷ್ಟು ಬೇಡವೆಂದರೂ ಕೇಳದೇ ಆ ಮಂಟಪದಲ್ಲಿ ನಾನು ರಾಧೆಯ ಜೊತೆಗೆ ಕೂಡಬೇಕೆಂದು ನನ್ನ ಸ್ನೇಹಿತರು ಬಲವಂತಪಡಿಸಿದುದರಿಂದ ಕುಳಿತೆ. ನನ್ನ ಮನಸ್ಸಿನಲ್ಲಿಯ ದುಃಖದ ಕುದಿಯನ್ನು ಅವರು ಹೇಗೆ ಬಲ್ಲರು ?

ಹಾಡಿನ ಮಾಧುರ್ಯ, ಮತ್ತು ಗಾಯಕಿಯ ಗಾಂಭೀರ್ಯ ನನ್ನನ್ನು ಬುಡಮೇಲಾಗಿಸಿದವು ಅವಳ ನಿಷ್ಕಪಟವಾದ ಮುಖವನ್ನು ನೋಡಿದಾಗ "ನೀನು ಪಡೆದು ಬಂದಿಲ್ಲ" ಎಂದು ನನ್ನ ಅಂತರಾತ್ಮ ಸಾರಿತು. ತಟ್ಟನೆ ಎದ್ದು ನನ್ನ ಕೋಣೆಯಕಡೆ ಹೊರಟೆ. ನಾನು ಹೊರಟಾಗ ನನ್ನನ್ನು ನಿಲ್ಲಿಸಿದ ಸ್ನೇಹಿತರಿಗೆ ಮೈ ಸರಿ ಇಲ್ಲವೆಂದು ಹೇಳಿ ಹೊರಟು ಹೋದೆ ಅಲ್ಲಿಯೇ ಹಾಡು ಕೇಳುತ್ತ ಕೇಳುತ್ತ ಎಷ್ಟು ಹೊತ್ತು ಹಾಗೆಯೇ ಮಲಗಿದ್ದೆನೋ ನನಗೆ ತಿಳಿಯದು ಆಗಿಹೋದ ಅನುಭವಗಳ ನೆನೆಪು ನನ್ನ ಮನದ ತೆರೆಯ ಮೇಲೆ ಚಿತ್ರಪಟದ ದೃಶ್ಯಗಳಂತೆ ಮೂಡಲಾರಂಭಿಸಿದವು

ಆಗ ನನ್ನ ವಯಸ್ಸು ಹತ್ತೊಂಬತ್ತು ಇರಬಹುದು ಶಿಕ್ಷಣ ಮುಗಿದೊಡನೆ ಬೆಳಗಾಂವಿಯಲ್ಲಿ ನೌಕರಿಗೆ ಸೇರಿದೆ. ನನಗೆ ಒಬ್ಬ ಪತ್ರಿಕಾ ಸಂಪಾದಕರ ಪರಿಚಯವಾಗಿ, ಅವರು ನನ್ನ ಲೇಖನಾವಲೋಕನ ಮಾಡಿ, ಮೆಚ್ಚಿ, ಹುಬ್ಬಳ್ಳಿಯ ವಾರಪತ್ರಿಕೆಗೆ ಸಮಾಚಾರ ಕಳುಹಲು ನನ್ನನ್ನೊಪ್ಪಿಸಿದರು ಕೆಲಸದ ಅಪಾರ ಹೊಣೆಯ ನಂತರ, ಈ ಕಾರ್ಯವನ್ನು ನಿರ್ವಹಿಸಲಾರದೇ ಹೋದರೂ, ನಾನವರಮಾತಿಗೆ ಮನ್ನಣೆ ಕೊಡಲು ಒಪ್ಪಿಕೊಂಡೆ. ಆಗ ಪದ್ಮಳಿಗೆ ಹದಿನಾರು ವರುಷ ಅವಳನ್ನು ಪ್ರತ್ಯಕ್ಷವಾಗಿ ನೋಡುವ ಮೊದಲು ನನಗವಳ ಹಾಡುಗಾರಿಕೆಯ ಪರಿಚಯ ರೇಡಿಯೋದ ಮೂಲಕ ಆಗಿತ್ತು ಆಹಾ ! ಆ ಸಂಗೀತದಲ್ಲಿಯ ಮಾಧುರ್ಯವನ್ನು ಎಂದೂ ಮರೆಯಲಾರ

ಆ ವಾರದ ಪತ್ರಿಕೆಯಲ್ಲಿ ಅವಳ ಸಂಗೀತದ ಬಗ್ಗೆ ಅಪಾರ ಪ್ರಶಂಸೆಯ ಲೇಖನವನ್ನು ಬರೆದೆ. ಅದೂ ಅಚ್ಚಾಗಿ ಹೊರಬಂತು

ವಾರಪತ್ರಿಕೆಯು ಹೊರಬಂದ ಮರುದಿನ ಪ್ರಾತಃಕಾಲ, ಸುಮಾರು ಅರವತ್ತು ವರುಷದ ಒಬ್ಬ ಹಿರಿಯರು, ಒಬ್ಬ ವಯಸ್ಸಾದ ಹುಡುಗಿಯೊಂದಿಗೆ ನನ್ನ ಕಚೇರಿಗೆ ಬಂದರು. ಆಗ ನಾನವರಿಗೆ ಸರಿಯಾದ ಆಸನ ಕೊಡ ಲಾರದೇ ಹೋದುದಕ್ಕೆ ಕ್ಷಮಾಪಣೆ ಬೇಡಿ ಪೋರ್ಟರನಿಗೆ ಹೇಳಿ ಎರಡು ಪೆಟ್ಟಿಗೆಗಳನ್ನು ಹಾಕಿ ಕೂಡಿಸಿ, ಆದರಿಸಿದೆ. ಅವರು ತಾವು ಅಲ್ಲಿ ಹತ್ತಿರ ದಲ್ಲಿಯೇ ಇದ್ದ ಸ್ಟೇಷನಿನ ನಿವೃತ್ತ ಸ್ಟೇಷನ್ ಮಾಸ್ತರರೆಂದೂ, ತಮ್ಮೊಡನೆ ಬಂದವಳು ಅವರ ಮಗಳು ಚಿ ಪದ್ಮಾ ಎಂದೂ ಪರಿಚಯ ಮಾಡಿಕೊಟ್ಟರು. ಗಾಯನ ಕಲೆಯಲ್ಲಿ ನನಗಿದ್ದ ರಸಿಕತೆಯನ್ನು ಚನ್ನಾಗಿ ಹೊಗಳಿ, ನಾನು ಬರೆದು ಕಳುಹಿದ ಆ ಲೇಖನದ ಬಗ್ಗೆ ಅಭಿನಂದನೆಯನ್ನಿತ್ತರು

ಪದ್ಮಳು ಮಾತನಾಡಲಿಲ್ಲ ಆದರೂ ಅವಳ ನಯನಗಳು "ನಾನೂ ನಿಮಗೆ ಋಣಿ" ಎನ್ನುವಂತಿದ್ದವು ಕೃತಜ್ಞತೆಯೊಂದಿಗೆ ಮತ್ತೊಂದಂಶ ವನ್ನೂ ಆ ಕಂಗಳಲ್ಲಿ ಕಂಡೆ!

ಅನಂತರ ಪದ್ಮ ರೇಡಿಯೋದಲ್ಲಿ ಅನೇಕಸಲ ಹಾಡಿದಳು. ಒಂದೊಂದು ಸಮಯದಲ್ಲಿ, ಅವಳ ಹಾಡಿನಲ್ಲಿ ಕುಂದು-ಕೊರತೆಗಳಿದ್ದರೂ ಅವುಗಳನ್ನು ಬಿಟ್ಟು ನಾನು ನನ್ನ ಲೇಖನವನ್ನು ಶ್ಲಾಘನೀಯವಾಗಿಯೇ ಬರೆದು ಕಳು ಹಿಸಿದೆ. ಪದ್ಮಳು ಆಗಾಗ್ಗೆ ನನ್ನ ಆಫೀಸಿಗೆ ಬಂದು ಭೆಟ್ಟಿಯಾಗುತ್ತಿದ್ದಳು

ಒಂದು ದಿನ ಪದ್ಮಳ ಅಪೇಕ್ಷೆಯ ಮೇರೆಗೆ ನಾನು ಅವರ ಮನೆಗೆ ಹೋಗಿದ್ದೆ, ಉಪಚಾರ ಬಲವಾಗಿತ್ತು. ರಾಯರು ವಿಶಾಲ ಹೃದಯದವ ರಾದ್ದರಿಂದ ನಮ್ಮಿರ್ವರ ಮಿಲನ ಸಮ್ಮಿಲನಗಳಿಗೆ ಅಡ್ಡಿ ತರಲಿಲ್ಲ

ನನ್ನ ತಂದೆಯವರಿಂದ ಆ ದಿನ ಬಂದ ಪತ್ರವನ್ನು ನೋಡಿದೊಡನೆಯೇ ಆಶ್ಚರ್ಯವಾಯಿತು. ನನ್ನ ಕಣ್ಣುಗಳನ್ನು ನಾನೇ ನಂಬಲಾರದೆ ಹೋದೆ ಹಣ್ಣುಜಾರಿ ಜೇನಿನಲ್ಲಿ ಬಿದ್ದಂತಾಯಿತು ಅದರಲ್ಲಿ ಕಂಡುದು ಇಷ್ಟೇ "ತಳಕವಾಡಿಯಲ್ಲಿರುವ ನಿವೃತ್ತ ಸ್ಟೇಶನ್ ಮಾಸ್ತರ ಶ್ಯಾಮರಾಯರ ಮಗಳು ಪದ್ಮಳ ಜಾತಕವೂ ನಿನ್ನ ಜಾತಕವೂ ಕೂಡಿಬಂದಿರುವುದರಿಂದ ನಾವು ಈ ದಿನ ಹೊರಟು ಅಲ್ಲಿಗೆ ಬರುತ್ತಲಿದ್ದೇವೆ. ಹೆಣ್ಣು ನಿನಗೆ ಸರಿಹೋದಲ್ಲಿ ಮುಹೂರ್ತ ನಿಶ್ಚಯ ಮಾಡುವುದಿದೆ ನೀನು ನಮ್ಮನ್ನು ಸ್ಟೇಶನದಲ್ಲಿ ಕಾಣು"

ಪತ್ರವನ್ನು ಒಂದು ನೂರು ಬಾರಿ ಓದಿದೆ. ಶ್ಯಾಮರಾಯರು ನನಗೆ ತಿಳಿಯದೇ ನಮ್ಮ ತಂದೆಯವರೊಂದಿಗೆ ಪತ್ರ ಬರೆದು ತಿಳಿದುಕೊಂಡಿರುವರು. ಪದ್ಮಳಿಗೆ ನನ್ನೊಂದಿಗೆ ಯಾವ ಅಡ್ಡಿ ಆತಂಕವಿಲ್ಲದೇ ನಡೆದುಕೊಳ್ಳಲು ಅವಕಾಶ ಏಕ ಕೊಡಲ್ಪಟ್ಟಿತೆಂಬುದು ನನಗೆ ಈಗ ವಿಶದವಾಯಿತು

ರಾತ್ರಿ ನಿಲ್ದಾಣಕ್ಕೆ ಹೋಗಿ ನನ್ನ ತಂದೆ ತಾಯಿಯವರನ್ನು ಕರೆದುಕೊಂಡು ಬಂದೆ ಮರುದಿನ ವಧು ಪರೀಕ್ಷೆಗೆ ಹೊರಟೆವು ಪದ್ಮ ನಮ್ಮೆಲ್ಲರಿಗೂ ನಮಸ್ಕರಿಸಿ ನಾಚಿಕೆಯಿಂದ ತಲೆಬಾಗಿ ನಿಂತಳು ನನ್ನ ತಂದೆತಾಯಿಗಳೆದುರಿನಲ್ಲಿ ಮೊದಲು ಅರಿಯದವನಂತೆ ವರ್ತಿಸಿದೆ ಅವಳೂ ನನ್ನೊಂದಿಗೆ ಹಾಗೇ ವರ್ತಿಸಿದಳು ಸಂಗೀತ ಪರೀಕ್ಷೆಯಾಯಿತು ಪದ್ಮಳ ಧ್ವನಿ, ಗರಳ ಕಂಠನ ಕಂಠದಲ್ಲಿಯ ವಿಷವನ್ನೂ ಅಮೃತವನ್ನಾಗಿಸುವ ಶಕ್ತಿಯುಳ್ಳ ಪದ್ಮಳ ಕಿನ್ನರಿಗಾನ, ನನ್ನ ತಂದೆ ತಾಯಿಗಳನ್ನು ಮುಗ್ಧಗೊಳಿಸಿತೆಂದು ಬೇರೆ ಹೇಳಬೇಕಾಗಿಲ್ಲ. ಅವರು ತಮ್ಮ ಒಪ್ಪಿಗೆಯನ್ನು ಸೂಚಿಸಿ ಮುಹೂರ್ತದ ದಿನವನ್ನು ನಿಶ್ಚಯಿಸಿ, ಕಾಗದ ಬರೆಯುವದಾಗಿ ಹೇಳಿ ಊರಿಗೆ ಹೊರಟರು.

ಒಂದು ವಾರ ಉರುಳಿತು ಆ ದಿನ ತಂದೆಯವರಿಂದ ಬಂದ ಪತ್ರವನ್ನು ಒಡೆದು ಆಶೆಯಿಂದ ಓದಲಾರಂಭಿಸಿದೆ ಅದನ್ನು ಓದುವಾಗ ಯಾರೋ ತಲೆಯ ಮೇಲೆ ಕಬ್ಬಿಣ ಸುತ್ತಿಗೆಯಿಂದ ಹೊಡೆದಂತಾಯ್ತು ಕಣ್ಣಿಗೆ ಕತ್ತಲು ಕವಿದಂತಾಯಿತು ಆದಷ್ಟು ಬೇಗ ಮುಹೂರ್ತ ನಿಶ್ಚಯಿಸಿ ಬರುತ್ತೇವೆಂದು ಹೋದವರು "ಈ ಸಂಬಂಧವು ಬೇಡವೇ ಬೇಡ" ಎಂದು ಬರೆದಿದ್ದರು ಅದಕ್ಕವರು ಬರೆದ ಕಾರಣ ಒಂದೇ "ಶ್ಯಾಮರಾಯರ ಅಣ್ಣನ ಮಗಳು ವಿಧವೆ ಪುನರ್ವಿವಾಹ ಮಾಡಿಕೊಂಡಿರುವಳು" ಎಂಬುದು ಅದನ್ನವರು ಶ್ಯಾಮರಾಯರಿಗೆ ತಿಳಿಸಿರುವದಾಗಿಯೂ ತಿಳಿಸಿದ್ದರು ಆ ಪತ್ರವನ್ನು ಪದ್ಮಳು ನೋಡಿದ್ದರೆ ಏನು ಗತಿ?

ಒಂದು ತಿಂಗಳ ಕಾಲ ನಾವೀರ್ವರೂ ಭೆಟ್ಟಿಯಾಗಿದ್ದಿಲ್ಲ ಒಂದು ದಿನ ನಾನು ಆಫೀಸಿನಲ್ಲಿ ಕುಳಿತಾಗ ಪದ್ಮಾ ಬಂದಳು ಯಾವಾಗಲೂ ಅವಳ ತುಟಿಗಳ ಮೇಲೆ ನಲಿದಾಡುತ್ತಿದ್ದ ಕಿರುನಗೆಯು ಮಾಯವಾಗಿತ್ತು. ನಾನು ಏನೂ ಮಾತನಾಡಲಿಲ್ಲ ಕೊನೆಗೆ ಧೈರ್ಯದಿಂದ "ಕುಳಿತುಕೊಳ್ಳಮ್ಮಾ" ಎಂದೆ ನನ್ನನ್ನೇ ದಿಟ್ಟಿಸಿ ನೋಡಿದಳು

'ಪದ್ಮಾ, ನೀನು ಚಿಂತಿಸಬೇಡ. ಏನೂ ಆಗಿಹೋಗಿಲ್ಲ. ನಾನು ನನ್ನ ತಂದೆಯವರ ಮನಸ್ಸನ್ನು ಬದಲಿಸಲು ಪ್ರಯತ್ನಿಸುತ್ತೇನೆ. ನಮ್ಮ

ಮನೋರಥವು ಈಡೇರುವುದೆಂದು ನನಗೆ ಸಂಪೂರ್ಣ ನಂಬಿಗೆಯಿದೆ” ಎಂದೆ ಅವಳಿಗೂ ಸ್ವಲ್ಪ ಧೈರ್ಯ ಬಂದಂತಾಯ್ತು. ಅಪ್ಪಣೆ ಪಡೆದು ಹೊರಟು ಹೋದಳು.

ದಿನಗಳುರುಳಿ ತಿಂಗಳುಗಳಿಗೆ ದಾರಿ ಕೊಟ್ಟಿತು. ನನ್ನ ತಂದೆಯುವರು ಅನೇಕ ವಧುಗಳನ್ನೂ ನೋಡಿ ಬರುವಂತೆ ನನಗೆ ಬರೆಯುತ್ತಿದ್ದರು. ನಾನು ಯಾವುದಕ್ಕೂ ಉತ್ತರ ಬರೆಯಲಿಲ್ಲ. ನೋಡಲೆಂದು ಹೋಗಲೂ ಇಲ್ಲ

ಎರಡು ವಸಂತಗಳು ಕಳೆದುಹೋದವು ಶ್ಯಾಮರಾಯರೂ ಇಹ ಲೋಕದ ವ್ಯಾಪಾರವನ್ನು ಮುಗಿಸಿದ್ದರು. ತನ್ನ ಮನೋರಥವು ನೆರವೇರ ಲಿಲ್ಲವೆಂಬುದೊಂದು ಕಡೆ; ತಂದೆಯವರನ್ನು ಕಳೆದುಕೊಂಡ ದುಃಖವೊಂದು ಕಡೆ. ಹೀಗಾಗಿ ಪದ್ಮಳ ದುರದೃಷ್ಟ ಅವಳನ್ನು ಬಹು ವಿಧವಾಗಿ ದುಃಖ ಕ್ಕೀಡುಮಾಡಿತ್ತು ಪದ್ಮ ಈಗ ಸಾಧಾರಣ ಪದ್ಮಳಾಗಿದ್ದಿಲ್ಲ, ಅವಳ ಸಂಗೀ ತವು ಈಗ ಬಹಳ ಅಭಿವೃದ್ಧಿಗೇರಿದ್ದಿತು. ಪ್ರಖ್ಯಾತ ಸಂಗೀತ ವಿಶಾರದೆ ಕುಮಾರಿ ಪದ್ಮಳ ಹೆಸರು ಕುಲರಸಿಕರ ಪ್ರಪಂಚದಲ್ಲಿ ಮುನ್ನುಗ್ಗಿ ಬಂದಿತ್ತು ಎಲ್ಲೆಲ್ಲಿಯೂ ಅವಳ ಸಂಗೀತದ ಮಾತೇ. ಯಾರನ್ನು ಕೇಳಿದರೂ, ಯಾವ ಪತ್ರಿಕೆಯಲ್ಲಿ ನೋಡಿದರೂ, ಕುಮಾರಿ ಪದ್ಮಳ ಹೊಗಳಿಕೆ, ಪ್ರಶಂಸೆ, ಮೆಚ್ಚು ಗೆಗಳೇ ಹೊರತು ಬೇರೇ ಇರಲಿಲ್ಲ. ಗೌರವ, ಪಾರಿತೋಷಕಗಳು ತಾವಾ ಗೆಯೇ ಅವಳನ್ನು ಬಂದು ಆಲಂಗಿಸಿದವು.

ಒಂದು ದಿನ ಪದ್ಮ ನನ್ನ ಆಫೀಸಿಗೆ ಬಂದಳು ಬಹಳ ಕಷ್ಟದಿಂದ ಒಂದು ಕಿರುನಗೆ ನಕ್ಕು ಕುಳಿತಳು.

“ಪದ್ಮಾ, ನಾನೂ ಬಹಳ ದಿನಗಳಿಂದ ಯೋಚಿಸಿ ಯೋಚಿಸಿ ಕೊನೆ ಗೊಂದು ನಿರ್ಧಾರಕ್ಕೆ ಬಂದಿದ್ದೇನೆ. ಇನ್ನು ನನ್ನ ತಂದೆಯುವರ ಅನುಮತಿ ಸಿಗುವುದೆಂಬ ಭರವಸೆಯು ನನಗಿಲ್ಲ ಆದ್ದರಿಂದ ನೀನು ನನ್ನೊಂದಿಗೆ ಹೊರಡು. ಮುಂಬೈಗೆ ಹೋಗಿ ಸಿವಿಲ್ ಮ್ಯಾರೇಜ ಮಾಡಿಕೊಳ್ಳೋಣ” ಎಂದೆ. ಅವಳ ಉತ್ತರ, ನನಗೆ ಮನಶ್ಶಾಂತಿ ತರಲಿಲ್ಲ.

“ಜೀವನದಲ್ಲಿ ಸಂಸಾರ ಸುಖವನ್ನು ಕಾಣಬೇಕೆಂಬುದೇ ನನ್ನ ಆಶಯ ಆದರೆ ನಿಮ್ಮ ತಂದೆಯವರೊಡನೆ ನಿಮಗೆ ವಿರೋಧವು ನನ್ನ ಮೂಲಕ ಆದ ಪಕ್ಷದಲ್ಲಿ ನನಗೆ ಅದು ಬಹು ದೊಡ್ಡ ಅಪವಾದ. ತಂದೆ ಮಕ್ಕಳನ್ನು ಬೇರ್ಪಡಿಸಿದೆನೆಂಬ ಅಪವಾದ ನನ್ನನ್ನು ನೋಯಿಸುವುದು. ಮತ್ತು ಅವರ ಮನಶ್ಶಾಂತಿಯನ್ನು ಕೆಡಿಸಲು ನಾನೆಂದಿಗೂ ಮುಂದೆ ಬರಲಾರೆ, ಪ್ರಯತ್ನಿಸ

ಲಾರೆ, ಒಪ್ಪಲಾರೆ. ಬರುವ ಜನ್ಮದಲ್ಲಾದರೂ ದೇವನು ನಮ್ಮನ್ನು ದಂಪತಿಗಳಾಗುವಂತೆ ಅನುಗ್ರಹಿಸಲಿ ನಿಮ್ಮ ತಂದೆಯವರ ಇಷ್ಟದಂತೆ ನೀವು ಅವರು ಒಪ್ಪಿದ ಹೆಣ್ಣನ್ನೇ ಮದುವೆಮಾಡಿಕೊಂಡು ಇದ್ದರೆ ಅದೇ ನನಗೆ ಸಂತೋಷ!!.... ನಿಮ್ಮನ್ನು ಮದುವೆಯಾಗಿ ನಿಮಗೆ ಮಾಡಲಿದ್ದ ಸೇವೆಯನ್ನು ಇನ್ನು ಮುಂದೆ ಸಂಗೀತಕ್ಕೆ ಮಾಡುತ್ತೇನೆ ಅದೇ ನನ್ನ ನೊಂದ ಮನಸ್ಸಿಗೆ ಶಾಂತಿಯನ್ನು ತಂದುಕೊಡುವುದು ನಾನಿನ್ನು ಬರುವೆ. ನಾನು ನಿಮ್ಮನ್ನು ಮತ್ತೆ ಕಾಣುವದು ನಿಮ್ಮ ಮದುವೆಯ ಮಂಟಪದಲ್ಲಿಯೇ. ಆಮಂತ್ರಣ ಕಳುಹಿಸಲು ಮರೆಯಬೇಡಿ'' ಎಂದು ಹೇಳಿ ನನ್ನ ಉತ್ತರವನ್ನು ನಿರೀಕ್ಷಿಸದೆ ಹೊರಟುಹೋದಳು.

ನಾನು ಮಾತಾಡಲಾರದೇ ಹೋದೆ. ನನ್ನಲ್ಲಿ ಅಷ್ಟು ಪ್ರೀತಿಶ್ರದ್ಧೆಗಳನ್ನು ತೋರುತ್ತಿದ್ದ ಪದ್ಮ, ನಮ್ಮ ಕುಟುಂಬದ ಒಕ್ಕೂಟಕ್ಕಾಗಿ, ತನ್ನ ಬಾಳ ಚಿಗುರನ್ನು ಕತ್ತರಿಸಿ ಕುಮಾರಿಯಾಗಿ ಉಳಿದು ಎಂತಹ ತ್ಯಾಗವನ್ನು ಮಾಡಿದಳು?

ನನ್ನ ತಂದೆಯುವರು ಮತ್ತೆ ಪತ್ರ ಬರೆಯಲಾರಂಭಿಸಿದರು ಒಂದು ಪತ್ರದಲ್ಲಿ "ನೀನು ಈ ವರುಷದೊಳಗಾಗಿಯೇ ಮದುವೆಯಾಗದಿದ್ದರೆ, ನಮ್ಮ ಪಿತೃ–ಪುತ್ರ ಸಂಬಂಧವು ಕಡಿದುಹೋಗುವುದು" ಎಂದು ತಿಳಿಸಿದ್ದರು. ಪದ್ಮ ತನ್ನ ಜೀವನದಲ್ಲಿಯ ಸಂಸಾರ ಸುಖವನ್ನು ತ್ಯಾಗಮಾಡಿ ಯಾವ ಸಂಬಂಧವನ್ನು ಕಡಿಯದೇ ಉಳಿಸಬೇಕೆಂದು ಪ್ರಯತ್ನಿಸಿ ಗೆದ್ದಿದ್ದಳೋ ಅದೇ ಸಂಬಂಧ ಕಡಿಯಲಾರದೇ, ಅದಕ್ಕಾಗಿ ನಾನು ಅದೇ ವರ್ಷದೊಳಗಾಗಿ ಮದುವೆಯಾಗಲು ಒಪ್ಪಿದೆ. ಮದುವೆ ನಿಶ್ಚಯವಾಗಿ ಮುಹೂರ್ತದ ದಿನವೂ ಹತ್ತರ ಬಂದಿತು. ಊರಿಗೆ ಹೊರಟೆ. ಅಲ್ಲಿ ಹೋದೊಡನೆ ಹೆಣ್ಣಿನವರ ಮನೆಯ ಆಮಂತ್ರಣ ಪತ್ರಿಕೆಯಲ್ಲಿ "ಮಿಸ್ ಪದ್ಮಾ, ಸಂಗೀತ ವಿಶಾರದೆ ಇವರ ಸಂಗೀತ" ಎಂದಿತ್ತು. ನಿಮ್ಮನ್ನು ಮದುವೆಯ ಮಂಟಪದಲ್ಲಿ ಕಾಣುತ್ತೇನೆಂಬ ಅವಳ ಮಾತನ್ನು ತಾನೇ ನಡೆಸಿಕೊಂಡಳು, ನನ್ನ ಪದ್ಮ! ಆ ಮಂಟಪದಲ್ಲಿ ವೇದಿಕೆಯ ಮೇಲೆ ಗಂಭೀರವಾಗಿ ಕುಳಿತಿರುವ, ಪ್ರಸಿದ್ಧ ಗಾಯನ ತಜ್ಞೆಯೇ, ಮಿಸ್ ಪದ್ಮ! ಆದರೆ ಅವಳ ನನ್ನ ನಡುವಿದ್ದ ಈ ವಿಷಯಗಳೆಲ್ಲ ಅಲ್ಲಿ ಕುಳಿತ ಬೇರೆಯವರಿಗೆ ಹೇಗೆ ತಿಳಿಯಬೇಕು?

× × × ×

ಹಾಸಿಗೆಯಲ್ಲಿದ್ದ ನನ್ನನ್ನು ಯಾರೋ ಎಬ್ಬಿಸಿದರು. ನಾನು ಊಟ ಮಾಡಿ ಹೊರಬಂದೊಡನೆ ಒಬ್ಬರು ನನಗೆ "ಕು. ಪದ್ಮಾ ಅವರು ಈ ರಾತ್ರಿ

ಗಾಡಿಯಲ್ಲಿ ಹೋಗಲಿದ್ದಾರೆ. ನಿಮ್ಮನ್ನು ನೋಡಬೇಕೆಂದಿದ್ದಾರೆ" ಎಂದ
ಮೆಲ್ಲನೆ. ನಾನು ಗಡಿಯಾರದ ಕಡೆ ನೋಡಿದೆ ಆಗಲೇ ಹತ್ತು ಹೊ
ದಿತ್ತು. ಹಾಗೆಯೇ ಸ್ಟೇಶನ್ನಿಗೆ ಹೊರಟೆ. ಎರಡನೆಯ ತರಗತಿಯ ಪ್ರ
ಸಿಕರ ವಿಶ್ರಾಂತಿ ಕೋಣೆಗೆ ಹೋಗಿ ಅಲ್ಲಿಯ ಈಜೀಚೇರಿನಲ್ಲಿ ಕುಳಿತಿ
ಐದು ನಿಮಿಷಗಳಲ್ಲಿ ಕು. ಪದ್ಮಾ ಅವರ ಸಂಗಡಿಗರೆಲ್ಲರೂ ಬಂದು ಸೇರಿದ
ಎಲ್ಲರೂ ಪ್ಲಾಟಫಾರ್ಮ ಮೇಲೆಯೇ ನಿಂತಾಗ ಪದ್ಮಳು ಮಾತ್ರ ಒ
ಬಂದು "ನೀವು ನನಗೆ ಆಮಂತ್ರಣ ಕಳಿಸಲೇ ಇಲ್ಲವಲ್ಲಾ?'' ಎಂದಳು

''ಪದ್ಮ, ನಿನಗೆ ನನ್ನ ಮನಸ್ಸಿನ ಕುದಿ ತಿಳಿದಿದ್ದರೂ ನನ್ನನ್ನು ಹಿ
ಕೇಳುವದು ನ್ಯಾಯವೇ? ನಿನ್ನನ್ನು ಹೃದಯ ಮಂದಿರದಲ್ಲಿ ಪೂಜಿಸಿದ ನಾ
ಬೇರೊಬ್ಬ ಹೆಣ್ಣನ್ನು ಮದುವೆಯಾಗುತ್ತಿರುವೆನೆಂದು ಯಾವ ಮನಸ್ಸಿನಿ
ತಿಳಿಸಲಿ'' ಎಂದು ಕಣ್ಣುಗಳಲ್ಲಿ ನೀರು ತುಂಬಿಬರಲು ತಡವರಿಸುತ್ತ ಹೇಳಿ

ಗಂಟೆ ಬಾರಿಸಿತು. ಗಾಡಿಯು ಬರುವ ಸೂಚನೆಯಾಯಿತ
ನನ್ನನ್ನೇ ನೋಡುತ್ತಿದ್ದ ಪದ್ಮಳು ನನ್ನ ಹತ್ತಿರ ಬಂದಳು. ನಾನವಳ
ದಿಟ್ಟಿಸಿ ನೋಡಿದೆ. ಆವಳು "ಇಲ್ಲಿಗೆ ನಾನು ನಿಮ್ಮನ್ನು ಕರೆಯಿಸಿದ ಕಾ
ಣವು ಇನ್ನೂ ನಿಮಗೆ ತಿಳಿದಿರಲಿಕ್ಕಿಲ್ಲ ನೀವು ಸದಾ ನನ್ನ ಧ್ಯಾನದಲ್ಲಿ
ಇದ್ದ ನನ್ನ ಸೋದರಿ ರಾಧೆಯ ಬಾಳ ಜೇನಿನಲ್ಲಿ ವಿಷವನ್ನು ಬೆರೆಯಿಸಬೇ
ಅವಳಲ್ಲಿ ಪೂರ್ಣಾನುರಾಗದಿಂದಿದ್ದು ನನ್ನನ್ನು ಮರೆತುಬಿಡಿ. ಹಾಗೆ ಮಾ
ತ್ತೇನೆಂದು ನೀವು ನನಗೆ ಮಾತು ಕೊಡಬೇಕು" ಎಂದಳು.

"ಸರಿ, ಹಾಗೆಯೇ ಆಗಲಿ" ಎಂದೆ. ನನಗೆ ತಿಳಿಯದೇ ನನ್ನ ಬಾ
ಯಿಂದ ಆ ಮಾತುಗಳು ಹೊರಬಿದ್ದಿದ್ದವು. ಗಾಡಿಯೂ ಬಂತು; ಅವಳು ತ
ಸಂಗಡಿಗರೊಡನೆ ಗಾಡಿಯಲ್ಲಿ ಹೋಗಿ ಕುಳಿತಳು. ಗಾಡಿ ಹೊರಟಿತ
ನಾನು ಮನೆಯ ಕಡೆ ಕಾಲುಹಾಕಿದೆ

"ಕೊಟ್ಟ ಭಾಷೆಗೆ ತಪ್ಪಲಾರೆ" ಎಂದು ಆ ದಿನ ಗೋವು ಕರು
ಹೇಳಿದ ಪದ್ಯವನ್ನು ಯಾವದೋ ಹುಡುಗನು ಪರೀಕ್ಷೆಗಾಗಿ ಓದುತ್ತಿ
ನಾನು ಪದ್ಮಳಿಗೆ ಕೊಟ್ಟ ಮಾತು ಜ್ಞಾಪಕಕ್ಕೆ ಬಂದು ''ನಾನು ನಿನ್ನ ಜೀವ
ವನ್ನು ಕೆಡಿಸಿದ ಪಾಪಿ, ನಾನು ಮಾತ್ರ ನಿನ್ನ ಜೀವನ ನಾವೆಯಲ್ಲಿ ಪ್ರ
ಶಿಸದೇ ಇದ್ದಿದ್ದರೆ—'' ನನ್ನ ಮಾತು ಮುಗಿಯುವದರೊಳಗಾಗಿ ಮನೆಯ
ಬಂದಿತ್ತು ಆ ಸಂಗೀತ ವಿಶಾರದೆ ಕುಳಿತಿದ್ದ ವೇದಿಕೆಯು ಮಾತ್ರ ಬರಿದಾ
ಇನ್ನೂ ಅಲ್ಲಿಯೇ ಭಣಗುಡುತ್ತಲಿತ್ತು.

# ಅನುಭವದ ಕಥೆ



ದೀಪ ಹಚ್ಚುವ ಹೊತ್ತಾಗಿದ್ದರೂ ಬಿಸಿಲಿನ ತಾಪ ಕಡಿಮೆಯಾಗಿದ್ದಿಲ್ಲ. ಚಂದ್ರಶೇಖರ ತಂಗಾಳಿಯನ್ನನ್ವೇಷಿಸಿ ಪಾರ್ಕಿನ ಕಡೆ ಹೊರಟಿದ್ದ. ಬಹಳ ಮಟ್ಟಿಗೆ ಜನಸಂದಣಿ ಕಡಿಮೆಯಾಗಿತ್ತು. ಯಾರೂ ಕೂಡದಿದ್ದ ಬೆಂಚಿನ ಮೇಲೆ ಕಾಲು ಚಾಚಿ ಮಲಗಿದ.

ಚಂದ್ರೂಗೆ ೩೦ ವರ್ಷಗಳಿರಬಹುದು. ಡಿಗ್ರಿ ಪಡೆದು ಎಲ್ಲೆಲ್ಲಿಯೋ ಕೆಲಸ ಹುಡುಕಿದ. ಆದರೆ ಎಲ್ಲವೂ ನಿಷ್ಫಲವಾಯಿತು. ಅಲೆದಲೆದು ಬೇಸತ್ತಿದ್ದ. "ನಮ್ಮ ಹಿರಿಯರು ಹೇಗೆ ಇದ್ದರೋ ಏನೋ? ಇಪ್ಪತ್ತು ವರ್ಷಗಳೆಂಬುವುದರೊಳಗೆ ಎಷ್ಟು ಸಂತೋಷವಾಗಿ, ಪುಷ್ಟಿಯಾಗಿ ತಿರುಗಾಡುತ್ತಿದ್ದರು. ಈ ಹಾಳಾದ ಓದು ಉದ್ಯೋಗ ಬಂದು ನಮ್ಮ ದೇಶವನ್ನು ಹಾಳು ಮಾಡಿತು" ಎಂದು ಅವನ ತಾಯಿಯು ಆಗಾಗ್ಗೆ ಪೇಚಾಡುತ್ತಿದ್ದುದನ್ನು ಕೇಳಿದ್ದ. ಚಂದ್ರು ಅದೇ ಯೋಚನೆಯಲ್ಲಿ ಮುಳುಗಿ ಈ ಲೋಕವನ್ನೇ ಮರೆತಂತಿತ್ತು.

"ಏನಪ್ಪಾ, ಯಾವ ದೇಶವನ್ನು ಮುಳುಗಿಸಬೇಕೆಂದು ಆತಿಸುವೆ?" ಎಂಬ ಧ್ವನಿ ಕೇಳಿ ಎಚ್ಚತ್ತ ಚಂದ್ರು. ಅವನ ಕಾಲೇಜ ಮಿತ್ರ, ಸ್ವಾಮಿ ಎದುರಿಗೆ ನಿಂತಿದ್ದ.

"ಏನೋ ಸ್ವಾಮಿ, ನೀನು ಎಲ್ಲಿಂದ ಇಳಿದು ಬಂದ್ಯ? ಎಲ್ಲಿದ್ದೀಯ? ಏನು ಕಥೆ?"

"ಇರಪ್ಪಾ, ಸ್ವಲ್ಪ ಸಾವಕಾಶವಾಗಿ ಹೇಳುತ್ತೇನೆ, ಮೊದಲು ವಿಶ್ರಾಂತಿ ತೆಗೆದುಕೊಳ್ಳುತ್ತೇನೆ"

ಇಬ್ಬರೂ ಹತ್ತಿರವೇ ಇದ್ದ ಕಾಫೀ ಹೋಟಲಿಗೆ ಹೋಗಿ ಕಾಫಿಗೆ ಆರ್ಡರು ಕೊಟ್ಟು ಕುಳಿತರು. ಸ್ವಾಮಿ ಪ್ರಾರಂಭಿಸಿದ –

"ಮೂರು ವರ್ಷಗಳವರೆಗೆ ಎಲ್ಲೆಲ್ಲಿಯೋ ಸುತ್ತಾಡಿದೆ. ಕಲಕತ್ತಾ, ಮುಂಬಯಿ, ದಿಲ್ಲಿ, ಲಕ್ನೋ ಒಂದು ಊರಲ್ಲ. ಒಂದು ತಿಂಗಳ ಒಂತೆ

ಇಲ್ಲಿಗೆ ಬಂದೆ. ಆದರೆ ನಿನ್ನನ್ನಿಲ್ಲಿ ಸಂಧಿಸುತ್ತೇನೆಂದು ಕನಸಿನಲ್ಲಿಯೂ ಎಣಿಸಿದ್ದಿಲ್ಲ ಈಗ ಇಲ್ಲಿಯ "ರಾಷ್ಟ್ರವೀರ"ದ ಉಪಸಂಪಾದಕನಾಗಿದ್ದೇನೆ. ನೀನು ಈಗ ಎಲ್ಲಿದ್ದೀ? ಏನು ವಿಷಯ? ಮದುವೆಯಾಯಿತೇ?

"ಅದನ್ನು ಯಾಕೆ ಕೇಳುತ್ತೀ? ಯಾವ ನೌಕರಿಯೂ ಸಿಕ್ಕಿಲ್ಲ ಈಗ ಸಿಗುವ ಹಾಗೆ ಇದೆ. ಆದರೆ ಅಷ್ಟರಲ್ಲಿ ನಮ್ಮ ತಾಯಿಯವರಿಗೆ ಗಡಿಬಿಡಿ ಹೆಣ್ಣು ನೋಡೋಣ ಅಂತ. ನೀನು ಉಪಸಂಪಾದಕನಾದುದು ಒಳ್ಳೆಯದೇ ಆಯಿತು. ನಾನೂ ಬರೆಯುವ ಚಟ ಇಟ್ಕೊಂಡಿದ್ದೀನಿ ನಿಮ್ಮ ವಾರಪತ್ರಿಕೆಯಲ್ಲಿ ಕೆಲವು ಕಥೆಗಳನ್ನು ಪ್ರಕಟಿಸಿ, ಸಹಾಯ ಮಾಡಬಹುದಲ್ಲವೇ? ಇರಲಿ ನಿನಗೆ ಈ ಕೆಲಸ ಹೇಗೆ ಸಿಕ್ಕಿತು?

"ಅದು ಒಂದು ದೊಡ್ಡ ಕಥೆ ಬಿಡು."

"ಅದೇನೆಂಬೋದನ್ನು ಹೇಳಪ್ಪಾ ಕೇಳೋಣ "

"ನಾನೂ ಬಹಳ ಕತೆಗಳನ್ನು ಬರೆದು ಆಗಾಗ ಪತ್ರಿಕೆಗಳಿಗೆ ಕಳುಹಿಸುತ್ತಿದ್ದೆ ಆದರೆ ಒಂದೂ ಪ್ರಕಟವಾಗುತ್ತಿದ್ದಿಲ್ಲ. ಕೊನೆಗೊಬ್ಬ ಸ್ನೇಹಿತರು, ಇದ್ದದ್ದು, ಇದ್ದಹಾಗೆ, ಅನುಭವಿಸಿದ್ದುದನ್ನು ಹಾಗೆಯೇ ಬರೆದರೆ ಒಳಿತೆಂದು ತಿಳಿಸಿದರು ಸರಿ, ನೋಡೋಣವೆಂದುಕೊಂಡೆ

ಆ ದಿನ ರಾತ್ರಿ ಸಿನಿಮಾ ನೋಡಿ ಹಿಂತಿರುಗುವದರೊಳಗೆ ಹೊತ್ತು ಬಹಳವಾಗಿತ್ತು ಅವಸರದಿಂದ ಮನೆಗೆ ನಡೆದು ಬರುತ್ತಿದ್ದೆ ಅದನ್ನು ನೋಡಿ ಅಲ್ಲಿಯೇ ತಿರುಗುತ್ತಿದ್ದ ಪೋಲೀಸರು ನನ್ನನ್ನು ಹಿಂಬಾಲಿಸಿದರು ನಾನು ಗಾಬರಿಯಾಗಿ ಓಡಲಾರಂಭಿಸಿದೆ. ನನ್ನನ್ನು ಕಳ್ಳನೆಂದು ತಿಳಿದಿರಬೇಕು, ಮತ್ತಿಷ್ಟು ತೀವ್ರಗತಿಯಿಂದ ಅವರೂ ಹಿಂಬಾಲಿಸಲಾರಂಭಿಸಿದರು ಹಾಗೆಯೇ ಓಡುತ್ತಲಿರುವಾಗ ಹಾದಿಯಲ್ಲಿದ್ದ ಒಂದು ಮನೆಯ ಕಿಟಕಿಯಿಂದ ಬೆಳಕು ಬಿದ್ದಿರುವದನ್ನು ಕಂಡೆ. ನನಗೆ ಒಂದು ಯೋಚನೆ ಹೊಳೆಯಿತು ಕೂಡಲೆ ಆ ತೆರೆದ ಕಿಟಕಿಗೆ ಹಾರಿ ಒಳಗಿಳಿದು ಬಾಗಿಲು ಹಾಕಿಕೊಂಡೆ ನಾನು ಹಾರಿದ ಶಬ್ದದಿಂದ ಅಲ್ಲಿ ಓದುತ್ತ ಕುಳಿತ ಯುವತಿಯು ಎಚ್ಚತ್ತು "ಕಳ್ಳ" ಎಂದು ಕೂಗಲಾರಂಭಿಸಿದಳು. ಆತ್ಮ ರಕ್ಷಣೆಗೆ ಏನು ಮಾಡಿದರೂ ಅಪರಾಧವಲ್ಲವೆಂದು ನನಗೆ ಗೊತ್ತಿತ್ತು ಅವಳ ಹತ್ತಿರ ಹೋಗಿ ಅವಳ ಬಾಯಿ ಮುಚ್ಚಿದ. ಆದರೆ ಮರುಕ್ಷಣವೇ ಅವಳು, ಹತ್ತಿರ ಅಲ್ಲಿಯೇ ಟೇಬಲ್ಲಿನ ಮೇಲಿದ್ದ ತಿರುಗಣಿ ತಂಬಿಗೆಗೆ ಕೈಹಾಕಿದಳು. "ಸ್ವಲ್ಪ ನಿಲ್ಲು, ನಾನು ಹೇಳುವದನ್ನು ಸ್ವಲ್ಪ ಕೇಳು" ಎಂದು ಅನ್ನುವದರೊಳಗಾಗಿ ತಂಬಿಗೆಯು

ನನ್ನ ತಲೆಗೆ ಭರದಿಂದ ಅಪ್ಪಳಿಸಿತು. ಅದರಲ್ಲಿದ್ದ ನೀರೂ, ಹಣೆಯ ರಕ್ತವೂ ಕೂಡಿ ಕೆಳಗೆ ಹರಿಯಲಾರಂಭಿಸಿತು. ಆಗ ನಾನು "ಅಮ್ಮಾ ನಾನು ಕಳ್ಳನಲ್ಲ, ನೀವೇ ನನ್ನನ್ನು ಕಾಪಾಡಬೇಕು, ನಾನು ನಿಮಗೆ ಶರಣು" ಎಂದು ಬೇಡಿಕೊಂಡೆ

ಎಷ್ಟಾದರೂ ಹೆಂಗರುಳು! ಅವಳು "ಹೂಂ'' ಎಂದು ವಿಜಯಶಾಲಿನಿಯಾದಂತೆ ಉತ್ತರವಿತ್ತು ಮೆಲ್ಲನೆ ಕೆಳಗಿಳಿದಳು; ಸದ್ಯ ನನ್ನ ಪುಣ್ಯ ಗಟ್ಟಿಯಾಗಿತ್ತು, ಅವರ ಮನೆಯವರೆಲ್ಲರೂ ಸೆಕೆ ಅಧಿಕವೆಂದು ಹಿತ್ತಲಿನಲ್ಲಿದ್ದ ಅಂಗಳದಲ್ಲಿ ಮಲಗಿದ್ದರು. "ಬದುಕಿದೆಯಾ ಬಡಜೀವವೇ" ಎಂದು ಕೊಂಚ ಸಮಯ ಅಲ್ಲಿದ್ದು ಪೋಲೀಸರ ಕಾಟದಿಂದ ತಪ್ಪಿಸಿಕೊಂಡು ತಡವಾಗಿ ಮನೆ ಸೇರಿದೆ.

ಮರುದಿನ ಪ್ರಾತಃಕಾಲ ನನ್ನ ತಾಯಿ ತಲೆಗೆ ನಾನು ಕಟ್ಟಿದ್ದ ಕಟ್ಟನ್ನು ನೋಡಿ "ಏನೋ ಅದು ತಲೆಗೆ ಕಟ್ಟು?'' ಎಂದು ಕೇಳಿಯೇ ಬಿಟ್ಟಳು

ಏನು ಹೇಳುವುದೆಂದು ತೋಚದೆ "ನಿನ್ನೆ ಕ್ರಿಕೆಟ್ ಆಡುವಾಗ ಚೆಂಡು ಬಡಿಯಿತು ಅಷ್ಟೇ, ಬೇರೆ ಏನೂ ಇಲ್ಲ" ಎಂದು ಉತ್ತರ ಕೊಟ್ಟೆ.

"ಅಯ್ಯೋ, ಇವತ್ತೇ ಹಾಗಾಗಬೇಕೇ? ಹೊಲಸು ಕ್ರಿಕೆಟ್. ಈ ದಿನ ಅವರ ಮನೆಗೆ ಹೆಣ್ಣು ನೋಡಲು ಹೋಗಬೇಕು. ನೀನು ತಲೆಗೆ ಪಟ್ಟಿ ಕಟ್ಟಿಕೊಂಡು ಕುಳಿತೆ; ಬಹಳ ಚೆನ್ನಾಗಿದೆ ಬಿಡಪ್ಪಾ'' ಎಂದಳು.

"ಈ ದಿನ ನನ್ನಿಂದಾಗದಮ್ಮ ಇನ್ನೊಂದು ದಿನ ನೋಡಿದರಾಯಿತು" ಎನ್ನುತ್ತಿರುವಾಗಲೇ ತಂದೆಯವರು ಮತ್ತಾರೋ ಹಿರಿಯರೊಂದಿಗೆ ಮಾತನಾಡುತ್ತ ಒಳಗೆ ಬಂದರು. ಅವರಾಡುತ್ತಿದ್ದ ಮಾತು ಸ್ವಲ್ಪ ಸ್ವಲ್ಪ ಕೇಳಿಸುತ್ತಿತ್ತು. ಆದರಿಂದ ಒಳಗೆ ಬಂದವರಲ್ಲೊಬ್ಬರು ನನ್ನ ಭಾವೀ ಶ್ವಶುರರೆಂದು ತಿಳಿದುಕೊಂಡೆ

"ಹೈದರಾಬಾದಿನಲ್ಲಿಯ ದಬ್ಬಾಳಿಕೆಗೆ ತಾಳಲಾರದೆ ಇಲ್ಲಿಗೆ ಬಂದರೆ, ಇಲ್ಲಿಯೂ ಅದೇ ಗೊಂದಲ."

"ಕಮಲೆ ಧೈರ್ಯಶಾಲಿ. ಬೇರೆಯವರಾಗಿದ್ದರೆ ಚೆನ್ನಾಗಿ ಅವನ ಬಲೆಯಲ್ಲಿ ಬಿದ್ದು, ಒದ್ದಾಡಿ ಹೋಗುತ್ತಿದ್ದರು."

"ಇದರಲ್ಲಿ ಧೈರ್ಯವೇನು ಬಂತು? ಹತ್ತಿ ಮೃದುವಾಗಿದ್ದರೂ ಅದನ್ನೇ ದಾರವನ್ನಾಗಿಸಿದರೆ ಗಟ್ಟಿಯಾಗುವುದಿಲ್ಲವೇ? ಅದೇನೋ ಕಾಣೆ. ಹೆಣ್ಣುಗಳಲ್ಲಿ ಆಪತ್ಸಮಯಕ್ಕೆ ಸರಿಯಾಗಿ ಇಲ್ಲದ ಬಲವೂ ಧೈರ್ಯವೂ ತಲೆದೋರುತ್ತವೆ."

ಹೀಗೆಯೇ ಇವರು ಮಾತನಾಡುತ್ತಿದ್ದರು. ನನಗೆ ನಿದ್ರೆ ಬರುವಂತಿತ್ತು. ಎಲ್ಲಿಯಾದರೂ ತಿರುಗಾಡಿಕೊಂಡು ಬರೋಣವೆಂದು ಹೊರಟೆ. ಹೊರಡು ವಾಗ ಏಕಾಏಕಿ ನಮ್ಮ ತಂದೆಯವರು "ಏನೋ ಸ್ವಾಮಿ, ತಲೆಗೇಕೆ ಕಟ್ಟು?" ಎಂದು ಸಿಟ್ಟಿನಿಂದ ಕೇಳಿದರು. ಅಮ್ಮನೊಂದಿಗೆ ಹೇಳಿದುದನ್ನೇ ಇಲ್ಲಿಯೂ ಹೇಳಿ ತಪ್ಪಿಸಿಕೊಂಡೆ.

"ನೋಡಿ, ಇವನಿಗೆ ಈ ಕ್ರಿಕೆಟ್ ಹುಚ್ಚು ಎಂದು ಬಿಡುವದೋ ಏನೋ'' ಎಂದು ತಂದೆಯವರು ಗುಣಗುಟ್ಟಿದರು.

ಅಂದು ನಾನು ತಲೆಗೆ ಹಾಸ್ಪಿಟಲ ಪೇಟಾ ಕಟ್ಟಿದ್ದರೂ ಸುಂದರ ನಾಗಿಯೇ ಕಂಡಿರಬೇಕು. ಆದರೆ ನಮಸ್ಕರಿಸಲು ಅವಳು ಹತ್ತಿರ ಬಂದಾಗ ಮಾತ್ರ ಗಾಬರಿಯಾದೆ; ಬಹಳ ನಡುಗತೊಡಗಿದೆ. ಆಗಿನ ನನ್ನ ಅವಸ್ಥೆ ಹೇಳತೀರದು. ಎಲ್ಲಿ ಅವಳು ನಿನ್ನೆ ರಾತ್ರಿಯ ಪ್ರಕರಣವನ್ನು ಎಲ್ಲರ ಎದುರು ಹೇಳುವಳೋ ಎಂಬ ಸಂಶಯಬಂತು. ಇದೇ ಮನೆಯ ಹೆಣ್ಣು ಎಂದು ತಿಳಿದಿದ್ದರೆ ಮೊದಲೇ ನಾನು ಬರುತ್ತಿದ್ದಿಲ್ಲವೆಂದು ಮನಸ್ಸಿನಲ್ಲಿಯೇ ವ್ಯಥೆಪಟ್ಟೆ. ಆದರೆ ಬಂದನಂತರ ಹೇಗೆ ಮುಚ್ಚಿಡುವದು? ಆದರೂ ಅವಳ ಕಣ್ಣುಗಳಲ್ಲಿ ಅಭಯವಿತ್ತು. "ಭಯಪಡಬೇಡಿ, ನಿಮ್ಮನ್ನೂ, ನಿಮ್ಮ ಕೃತ್ಯ ವನ್ನೂ ಬಯಲಿಗೆಳೆಯುವಷ್ಟು ಅನೀತಿಯವಳಲ್ಲ ನಾನು ಮೇಲಾಗಿ ನಾನು ನಿಮ್ಮನ್ನು........'' ಎಂಬ ಸಂದೇಶವನ್ನು ಆ ಕಂಣುಗಳು ಸಾರುತ್ತಿದ್ದವು. ಆ ಹೆಣ್ಣು ತಟ್ಟನೆ ನಮಸ್ಕರಿಸಿ ಹೊರಟುಹೋದಳು. ಆ ದಿನ ನಾನು ಮನೆಗೆ ಬಂದ ಮೇಲೆ ನಮ್ಮ ತಾಯಿಯು "ಕಮಲೆಯು ನಿನ್ನ ಘಾಯಕ್ಕೆ ಏನೋ ಔಷಧಿ ಕೊಟ್ಟಿರುವಳು" ಎಂದು ಹೇಳಿ ಒಂದು ಚೀಟಿಯನ್ನು ತಂದುಕೊಟ್ಟರು. ನಾನದನ್ನು ನನ್ನ ಕೈಯಲ್ಲಿ ತೆಗೆದುಕೊಂಡು ಕೋಣೆಯಲ್ಲಿ ಯಾರೂ ಇಲ್ಲದ ವೇಳೆಯಲ್ಲಿ ಬಿಚ್ಚಿದೆ. ಆದರಲ್ಲಿ ಏನೂ ಬರೆದಿದ್ದಿಲ್ಲ. ಬರಿ ಒಂದು ತಿರುಗಣಿ ತಂಬಿಗೆಯ ಚಿತ್ರವಿತ್ತು. "ಶಹಭಾಸ್ ಕಮಲೆ ನಾನೇ ಧನ್ಯ" ಎಂದು ನನ್ನ ಬೆನ್ನು ನಾನೇ ಚಪ್ಪರಿಸಿಕೊಂಡೆ.

ಕಥೆ ಮುಗಿಯಿತು. ಇಲ್ಲಿಯವರೆಗೂ ಕೇಳುತ್ತಿದ್ದ ಚಂದ್ರು "ಏನೋ! ಇದೆಲ್ಲವೂ ನಿಜವಾಗಿ ನಡೆಯಿತೋ, ಇಲ್ಲವೆ ಸುಳ್ಳೇನಾದರೂ ಹೇಳುತ್ತಿರು ವೆಯೊ?" ಎಂದು ಕೇಳಿದೆ.

"ಸುಳ್ಳಾದರೆ ಇಲ್ಲಿ ನೋಡು, ನನ್ನ ಹಣೆಯ ಮೇಲಿನ ಘಾಯು, ಅದೂ ನಂಬಿಕೆಯಿಲ್ಲದಿದ್ದರೆ ನಡೆ ನಮ್ಮ ಮನೆಗೆ ಹೋಗುವಾ'' ಎಂದ ಸ್ವಾಮಿ.

"ಅದು ಸರಿ, ನಿನಗೆ ಉಪಸಂಪಾದಕರ ನೌಕರಿ ಹೇಗೆ ದೊರೆಯಿತು?

"ಇದೇ ಕಥೆಯನ್ನು "ತಿರುಗಣಿ ತಂಬಿಗೆ" ಎಂದು ಹೆಸರಿಟ್ಟು ಮೊದಲು 'ಸ್ವಂತ ಅನುಭವದ ಕಥೆಯಾದರೆ ಒಳಿತು' ಎಂದುತ್ತರವಿತ್ತಿದ್ದ "ರಾಷ್ಟ್ರ ವೀರ" ದ ಸಂಪಾದಕರಿಗೆ ಕಳುಹಿಸಿದೆ, ಅವರು ಮರುದಿನವೇ ನನ್ನನ್ನು ಉಪ ಸಂಪಾದಕರ ಸ್ಥಳದಲ್ಲಿ ನಿಯಮಿಸಿಕೊಂಡುಬಿಟ್ಟರು." ಎಂದು ಹೇಳಿ ಸ್ವಾಮಿ ತನ್ನ ಕತೆ ಮುಗಿಸಿದ. ವೇಳೆ ಹೆಚ್ಚಾಗಿದ್ದರಿಂದ ನಾನೂ ಮನೆಯ ಕಡೆ ಹಾದಿ ಹಿಡಿದೆ.

---



# ದೇವರ ದಾರಿ



"ಸುಂದರಮ್ಮ, ನಾಗೇಶರಾಯರು, ಅವರ ಮಗ ವೆಂಕಟೇಶನನ್ನು" ಬೆಳಗಿನ ಜಾವದ ಗಾಡಿಯು ತಂದು ಹುಬ್ಬಳ್ಳಿಯಲ್ಲಿ ಬಿಟ್ಟಿತು. ಅಲ್ಲಿಂದ ಟಾಂಗಾದಲ್ಲಿ ಕುಳಿತು ಅವರೆಲ್ಲರೂ ರಾಜಾರಾಯರ ಮನೆಗೆ ಬಂದರು.

"ಏ ಲಲಿತ, ಇನ್ನೂ ರಂಗೋಲಿ ಹಾಕುತ್ತಿರುವೆಯಲ್ಲ? ಅವರ ಗಾಡಿ ಬಂದಾಯ್ತು. ಅವರೆಲ್ಲರೂ ಬಂದುಬಿಟ್ಟರು ನಿನ್ನ ದರಿದ್ರ ಮುಖ ತೋರಿಸ ಬೇಡ ಅವರಿಗೆ; ಹೋಗು. ಒಳಗೆ ಹೋಗಿ ಒಲೆಯ ಕಡೆ ಲಕ್ಷ್ಯ ಕೊಡು" ಎಂದು ಗದ್ದರಿಸಿ ಹೇಳಿದರು ಶ್ರೀಮತಿ ರಾಧಮ್ಮನವರು.

ಬಾಗಿಲಲ್ಲಿ ರಂಗೋಲಿ ಹಾಕುತ್ತಲಿದ್ದ ಲಲಿತ ಬಂದವರನ್ನೊಂದು ಬಾರಿ ನೋಡಿ ಒಳಗೆ ಹೊರಟು ಹೋದಳು.

ಇದನ್ನು ನೋಡುತ್ತಲೇ ಇದ್ದ ವೆಂಕಟೇಶನಿಗೆ, ಆ ಹೆಣ್ಣಿನ ಭಯ ಸ್ವಭಾವವನ್ನು ಕಂಡು ದಯೆಯೂ, ರಾಧಮ್ಮನವರ ರಾಕ್ಷಸ ವರ್ತನೆಯನ್ನು ಕಂಡು ಸಿಟ್ಟೂ ಬಂದವು. ಇದಾವುದನ್ನೂ ತೋರಗೊಡದೆ ಒಳಗೆ ಹೋದ

ಹೆಣ್ಣಿನ ತಂದೆ ರಾಜಾರಾಯರು ಬಂದವರನ್ನು ಉಪಚರಿಸಿ ಹಾಲಿನಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕೂಡಿಸಿದರು. "ಏ ಲಲಿತಾ, ಆ ತಾಂಬೂಲದ ತಾಟನ್ನು ಹೀಗೆ ಕೊಡು, ಲೇ! ಕಾಫಿ ತಯಾರಾಗಿದ್ದರೆ ಕಳಿಸಲ್ಲ ಪದ್ಮ ಏನು ಮಾಡುತ್ತಾ ಇದ್ದಾಳೆ? ಬಂದು ನಮಸ್ಕಾರ ಮಾಡು ಅನ್ನು" ಎಂದು ಗಡಿಬಿಡಿ ಮಾಡಿದರು. ಅವರೇ ಎದ್ದು ಹೋಗಿ ತಾಂಬೂಲದ ತಾಟು ಕಾಫಿ ಲೋಟಾಗಳನ್ನು ತಂದಿಡಬೇಕಾಯಿತು.

ರಾಧಮ್ಮನವರು ಒಳಗೆ "ಲಲಿತ, ನಿನಗೇನು ಈಗ ಈ ಅಲಂಕಾರ? ಆ ಹೂವನ್ನು ಪದ್ಮಳಿಗೆ ಮುಡಿಸಬಾರದೇ .. ಶನಿ, ಯಾವುದಕ್ಕೂ ಉಪಯೋಗವಿಲ್ಲ. ಹೋಗು, ಮಗ್ಗಲು ಮನೆಯ ಭಾವಿಯಿಂದ ಒಂದು ಕೊಡ ನೀರು ತೆಗೆದುಕೊಂಡು ಬಾ ಹೋಗು" ಎಂದು ಎಲ್ಲರೂ ಕೇಳುವಂತೆ ಒದರಿ ಹೇಳಿದಳು.

ರೂಪವತಿಯಾದ ಲಲಿತಳಿಗೆ ಹದಿನಾಲ್ಕು ವರುಷಗಳಿದ್ದವು. ಕಳೆಯಿಂದ ಕೂಡಿದ ಮುಖದಲ್ಲಿ ಪರರ ಕರುಣೆಯನ್ನೇ ಎದುರುನೋಡುತ್ತಿದ್ದ

ಎಳೆ ಕಣ್ಣುಗಳು. ಅರಳಲಿರುವ ಗುಲಾಬಿಯನ್ನು ಜ್ಞಾಪಕಕ್ಕೆ ತರುವಂತಹ ಮುಖ. ಅಖಂಡ ಶೋಭೆಯಿಂದ ಬೆಳಗುವ ಅವಳ ದೇಹವನ್ನು ಹಸಿರಿದ ಸೀರೆಯೊಂದು ಸುತ್ತಿಕೊಂಡಿತ್ತು. ಕೈಯಲ್ಲಿ ಗಿಲಗಿಲೆನ್ನುವ ಆ ಎರಡೆರಡು ಕಾಜಿನ ಬಳೆಗಳೇ ಅವಳ ಸರ್ವಾಭರಣ ಕೃತಕ ಸೌಂದರ್ಯ ಲೇಶವೂ ಇಲ್ಲದಿರುವಂತೆ ದೇವರು ಅವಳಿಗೆ ನೈಜ ಸೌಂದರ್ಯವನ್ನು ದಯಪಾಲಿಸಿದ್ದ

ಹಾಲಿನಲ್ಲಿ ಕುಳಿತವರನ್ನು ನೋಡಲು ಸಹ ಭಯಪಟ್ಟವಳಾಗಿ ಲಲಿತ ಕೊಡದೊಂದಿಗೆ ತಲೆಬಾಗಿ ಹೊರಹೊರಟಳು.

ಅವಳಾರು?

ಪದ್ಮಳು ಆಗಂತುಕರು ಕುಳಿತಿದ್ದ ಹಾಲಿಗೆ ತರಲ್ಪಟ್ಟಳು.

"ನಮಸ್ಕಾರ ಮಾಡಿ, ಎರಡು ಹಾಡುಗಳನ್ನು ಹಾಡಮ್ಮಾ" ಎಂದು ರಾಜಾರಾಯರು ಮಗಳಿಗೆ ಹೇಳಿದರು

ಒಳ್ಳೆಯ ಗೊಬ್ಬರ ಹಾಕಿ ಹದ ಮಾಡಲ್ಪಟ್ಟ ನೆಲದಲ್ಲಿ ಪೂರ್ಣ ಕಳೆಯಿಂದ ಬೆಳೆದ ಬಾಳೆಯ ಗಿಡದಂತಿದ್ದಳು ಪದ್ಮ ಅವಳ ದೇಹದಲ್ಲಿಯ ಮಾಂಸ ಕಂಡಗಳಿಗೆ ಪೂರ್ಣ ಸ್ವಾತಂತ್ರ್ಯ ಕೊಟ್ಟು ಬೆಳೆಸಿದಂತಿತ್ತು ಅವಳ ಆಕೃತಿ. ಕಿವಿ, ಕುತ್ತಿಗೆ, ಮೂಗುಗಳಲ್ಲಿಯ ಆಭರಣಗಳು ಅವರ ಮನೆತನದ ಲಕ್ಷ್ಮೀಕಟಾಕ್ಷವನ್ನು ಸೂಚಿಸುವಂತಿದ್ದವು

"ಎಲ್ಲಿ, ಎರಡು ಹಾಡು ಹೇಳಮ್ಮ"

"ನಾನು ಒಂದೇ ಹೇಳುತ್ತೇನೆ" ಎಂದು ನಸುನಗುತ್ತ ಕೇಳಿಕೊಂಡಳು ಪದ್ಮಾ.

"ಆಗಲಿ, ಚಂದವಾಗಿ ಒಂದು ಹೇಳು" ಎಂದು ಹೇಳಿ ಸುಮ್ಮನಾದರು ರಾಜಾರಾಯರು.

ತಾರು ಮಾರಾಗಿ, ಆ ವೀಣೆಯ ಅನೇಕ ತಂತಿಗಳನ್ನು, ಹಸಿದ ಉದರ ಬ್ರಹ್ಮನ ಕರುಳಿನ ತಂತಿಗಳನ್ನು ಮೀಟಿದಂತೆ ಮೀಟಿ "ಮೂವತ್ತುಮೂರು ಕೋಟಿ" ಹಾಡಿ ಮುಗಿಸಿದಳು ಪದ್ಮ. ಬೆಸ್ಕು ಹಾಕಿದ ಬಾಗಿಲನ್ನು ಕೆರೆಯುವಂತೆ ಆ ವೀಣೆಯ ತಂತಿಗಳನ್ನು ಕೆರೆದು ಅವಳು ಹಾಡಿದ ಆ 'ಮೂವತ್ತು ಮೂರು ಕೋಟಿ'ಯನ್ನು ಕೇಳಲು ಕೋಟಿ ಕಿವಿಗಳೂ, ಅವಳು ಹಾಡುವಾಗ ಮಾಡಿದ ಮುಖವಿನ್ಯಾಸಗಳನ್ನು ನೋಡಲು ಕೋಟಿ ಕಣ್ಣುಗಳೂ ಬೇಕೆನಿಸಿತು ವೆಂಕಟೇಶನಿಗೆ.

ಬಾಗಿಲ ಕಡೆ ನೋಡಿದ. ಟೊಂಕದಲ್ಲಿಟ್ಟ ಕೊಡವ ಭಾರವನ್ನು ತಡೆಯಲು ಬಲಗೈಯನ್ನೂ ಸ್ವಲ್ಪ ಬಗ್ಗಿಸಿ ಮುಂದಕ್ಕೆ ಬರುತ್ತಿದ್ದ ಲಲಿತ, ವೆಂಕಟೇಶ ತನ್ನನ್ನೇ ನೋಡುವುದನ್ನು ಕಂಡು ನಾಚಿಕೆಗೊಂಡು ಕೆಂಪೇರಿದ ಮುಖದಿಂದ ತಲೆತಗ್ಗಿಸಿಕೊಂಡು ಒಳಗೆ ಬಂದಳು.

ಹಾಡು ಮುಗಿಯಿತು ಪದ್ಮ ಎದ್ದು ಹೋದಳು. ನಾಗೇಶರಾಯರಿಗೆ ಮಹಾತೃಪ್ತಿ. ಈ ಹೆಣ್ಣು ನಿಶ್ಚಯವಾಯಿತೆಂದರೆ ರಾಜಾರಾಯರ ಆಸ್ತಿಯೂ ಅವರ ಒಬ್ಬಳೇ ಮಗಳಾದ ಪದ್ಮಳಿಗೆ ತಾನೆ, ಎಂದು ಅವರು ಮನಸ್ಸಿನಲ್ಲಿಯೇ ಕನಸಿನ ಕೋಟೆಯನ್ನು ಕಟ್ಟಲಾರಂಭಿಸಿದರು.

ಇದೆಲ್ಲವನ್ನು ಬಿಟ್ಟು ಎರಡೂ ಪಕ್ಷದವರೂ ವ್ಯಾಪಾರಕ್ಕಿಳಿದರು. ವೆಂಕಟೇಶನಿಗೆ ಇದೆಲ್ಲವೂ ಏಕೋ ಸರಿ ತೋರಲಿಲ್ಲ. ಅವನ ಮನಸ್ಸು ಒಂದೇ ಒಂದು ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಲಿತ್ತು ಅಷ್ಟರಲ್ಲಿ ನಾಗೇಶರಾಯರೇ ಮಾತಿನಲ್ಲಿಳಿದು ಬಿಟ್ಟರು.

"ಆ ಹುಡಿಗೆ ಯಾರು"

"ಅವಳೇ? ಅವಳು ...ನಮ್ಮ" ಎಂದು ರಾಜಾರಾಯರು ಆರಂಭಮಾಡಿದೊಡನೆಯೇ ''ಅವಳೇ .. ಅನಾಥೆ, ತಂದೆ ತಾಯಿಗಳ್ಯಾರೂ ಇಲ್ಲ. ಇಲ್ಲೇ ಇದ್ದಾಳೆ'' ಎಂದು ತಟ್ಟನೆ ಹೇಳಿ ಮುಗಿಸಿದರು ರಾಧಮ್ಮ.

''ಹೌದು ...ಹೌದು'' ಎಂದು ರಾಜಾರಾಯರು ತಲೆ ಅಲ್ಲಾಡಿಸಿದರು.

ವೆಂಕಟೇಶ ಹೊರಗೆ ಬಂದು ಬಿಟ್ಟ.

‡ ‡ ‡

"ಏನೋ ವೆಂಕಪ್ಪ ಇಲ್ಲಿ ಇದ್ದೀಯಾ"

ಧನಿ ಕೇಳಿ ಹಿಂತಿರುಗಿ ನೋಡಿದ ವೆಂಕಟೇಶ. ಅವನ ಕ್ಲಾಸಮೇಟ ಆನಂದ ಅಲ್ಲಿ ಎದುರು ಮನೆಯ ಜಗುಲಿಯ ಮೇಲೆ ನಿಂತಿದ್ದ.

"ಆನಂದ್, ನೀ ಇಲ್ಲೇ ಇದ್ದೀ ಏನು?''

"ಹೌದು''

ವೆಂಕಟೇಶನಿಗೆ ಒಂದು ಯೋಚನೆ ಹೊಳೆಯಿತು. ಅವನು ನಡೆದ ಎಲ್ಲ ವಿವರಗಳನ್ನು ಆನಂದನಿಗೆ ಹೇಳಿ–ಲಲಿತಳ ಸಮಾಚಾರವನ್ನು ಕೇಳಿದ.

ಅದು ಒಂದು ದೊಡ್ಡ ಕಥೆ ವೆಂಕಪ್ಪ. ಈ ರಾಜಾರಾಯರು ಇದ್ದಾರಲ್ಲ, ಅವರು ಒಬ್ಬ ಹೆನ್-ಪೆಕ್ಡ. ರಾಧಮ್ಮ ಅವರ ಜುಟ್ಟು ಹಿಡಿದು ಚೆನ್ನಾಗಿ ಆಡಿಸುತ್ತಾಳೆ. ಲಲಿತ ಇವರ ಸ್ವಂತ ತಂಗಿಯ ಮಗಳು.

ವೆಂಕಟೇಶನ ಕೋಪವು ತಡೆಯಲಾಗಲಿಲ್ಲ.

''ಹಾಗಾದರೆ ಅನಾಥೆ ಎಂದು ಆಕೆಯು ಹೇಳಲು ಕಾರಣ?"

''ಅನಾಥೆಯಾಗಿಯೇ ಇರುವಳು. ಇಲ್ಲಿ ವಿದ್ವಾನ್ ನಾರಾಯಣ ರಾಯರೆಂದು ಇದ್ದರಲ್ಲಾ, ನಿನಗೆ ಗೊತ್ತಿದೆಯಲ್ಲವೇ?"

"ಹೌದು ಗೊತ್ತಿದೆ."

"ಅವರ ಪುತ್ರಿಯೇ ಈ ಲಲಿತ. ಸಣ್ಣ ವಯಸ್ಸಿನಲ್ಲೇ ತಂದೆ-ತಾಯಿ ಯರು ಕಾಲವಾದರು. ಆ ದಿನದಿಂದ ಸೋದರಮಾವನ ಮನೆಯಲ್ಲಿಯೇ ಬೆಳೆಯುತ್ತಿರುವಳು. ನಾರಾಯಣರಾಯರಿಗೆ ಬೇರೆ ಗಂಡುಸಂತತಿ ಇರ ಲಿಲ್ಲ ಅವರು ಬಿಟ್ಟು ಹೋದ ಆಸ್ತಿ ಎಲ್ಲವನ್ನು 'ಸ್ವಾಹಾ' ಎನ್ನಿಸಿಬಿಟ್ಟಿರು ವರು ಶ್ರೀಮತಿ ರಾಧಮ್ಮನವರ ಕರುಣಾಕಟಾಕ್ಷದಿಂದ ಎರಡು ಹೊತ್ತಿನ ಎಂಜಲು ತಂಗಳನ್ನ, ಹರಕು ಚಿಂದಿಗಳಿಗೆ ಲಲಿತೆಗೆ ಕಡಿಮೆ ಇಲ್ಲ ನೀನು ಈ ಮನೆಗೆ ಅಳಿಯನಾಗಿ ಬರಲಿರುವಿ ನಿನ್ನ ಮುಂದೆ ಏನೇನೋ ಹೇಳಿ ಬಿಟ್ಟೆ, ಕ್ಷಮಿಸಪ್ಪಾ" ಎಂದ ಆನಂದ.

ವೆಂಕಟೇಶನ ಮನಸ್ಸಿನಲ್ಲಿ ತಳಮಳವೆದ್ದಿತು. ಇಷ್ಟರಲ್ಲಿ ನಾಗೇಶ ರಾಯರು ಜಾತಕವನ್ನು ತೆಗೆದುಕೊಂಡು ಹೊರಬಿದ್ದರು. "ಹುಡಿಗೆಯ ನ್ನೇನೋ ಒಪ್ಪಿದ ಹಾಗೇ. ಇನ್ನು ಜಾತಕವು ಕೂಡಿಬಂದರೆ ಮದುವೆಯ ಏರ್ಪಾಟು ಮಾಡಿಬಿಡೋಣ'' ಎಂಬ ಆವಸರ ಅವರಿಗೆ.

* * *

ಮೂರನೆಯ ದಿನ ಮುಂಜಾನೆ ಏಳು ಗಂಟೆಗಳಿರಬಹುದು. ವೆಂಕಟೇಶ ನೊಂದ ಮನಸ್ಸಿನಿಂದ ಕೋಣೆಯಲ್ಲಿ ಕುಳಿತಿದ್ದ ಅನಾಥೆ ಲಲಿತಳನ್ನು ನೆನೆದು ಅವನ ಮನಸ್ಸು ಸಂಕಟಪಡುತ್ತಿತ್ತು. ಅವಳನ್ನು ತನ್ನ ಅಣ್ಣನ ಮಗಳೆಂದು ಹೇಳಿಕೊಳ್ಳಲು ಸಹ ಸಹಿಸದ ರಾಧಮ್ಮನವರನ್ನೂ, ಅವರಿಗೆ ಗಾಬರಿಯಾಗುವ ಆ ಗಂಡನೆನ್ನಿಸಿಕೊಂಡ ರಾಜಾರಾಯರನ್ನೂ ನೆನೆಯಲು ಕೂಡ ಅವನಿಗೆ ಅಸಹ್ಯವೆನಿಸಿತು.

ಆಗ ಅವನ ಕೋಣೆಯಲ್ಲಿ ನಾಗೇಶರಾಯರು ಬಂದು "ಏನಪ್ಪಾ, ಜಾತಕ ಜೋಯಿಸರಲ್ಲಿ ತೋರಿಸಿದೆ. ಎಲ್ಲ ವಿಧದಲ್ಲೂ ಸರಿ ಹೋಗಿದೆ" ಎಂಧರು. ಮನೆತನವೂ ಒಳ್ಳೇದೇ; ಲಗ್ನ ನಿಶ್ಚಯ ಮಾಡೋಣ ಅಂತ ಇದ್ದೀನಿ. ನೀ ಏನು ಹೇಳ್ತಿ ಹೇಳು" ಎಂದರು.

''ಅವನು ಹೇಳೋದೇನು. ಇವತ್ತು ಶುಕ್ರವಾರ ಒಳ್ಳೆಯ ದಿನ ನಿಶ್ಚಯ ಮಾಡಿಸಿ ಬಿಡಿ" ಎಂದು ಸುಂದರಮ್ಮ ಒಳಗೆ ಬರುತ್ತಲೇ ನುಡಿದರು.

ವೆಂಕಟೇಶನಿಗೆ ತಡೆಯಲಾಗಲಿಲ್ಲ. ''ನಿಮಗೆ ಹಣವೇ ಪ್ರಧಾನ ವಲ್ಲವೇ? ಅವಳು ಹಾಕಿಕೊಂಡಿದ್ದ ವಜ್ರದ ವಸ್ತುಗಳನ್ನು ನೋಡಿದೊಡನೆಯೇ ನಿಮ್ಮ ತಲೆ ತಿರುಗಿರಬೇಕು'' ಎಂದು ಆವೇಶದಿಂದ ನುಡಿದ.

''ಹಣಕ್ಕಾಗಿ ಅಲ್ಲಪ್ಪಾ; ಜೋಯಿಸರು ಏನು ಹೇಳಿದರು ಗೊತ್ತೇ? ಜಾತಕವು ಅಪೂರ್ವವಾದುದು. ಇಂತಹ ಜಾತಕ ಎಲ್ಲಿ ಹುಡುಕಿದರೂ ಸಿಗಲಾರದು'' ಎಂದರು.

"ಹೆಣ್ಣಿನವರು ಬಡವರಾಗಿದ್ದರೆ ಜೋಯಿಸರ ಮಾತನ್ನು ನಂಬುತ್ತಿದ್ದಿರಾ ನೀವು?"

"ಹಾಗಲ್ಲೊ! ಹೆಣ್ಣಿನ ತಂದೆ ದರಿದ್ರರಾದರೂ ನಾನು ಇದನ್ನೇ ಹೇಳುವವನು. ನನಗೆ ಜಾತಕದಲ್ಲಿಯ ನಂಬಿಕೆ ಕಮ್ಮಿಯಾಗಲಾರದು ರಾಜಾರಾಯರು ಹೆಚ್ಚು ಕಮ್ಮಿ ಮಾಡಿದರೂ ಚಿಂತೆ ಇಲ್ಲ. ಬರುವ ಹೆಣ್ಣಿನ ಜಾತಕ ಅಷ್ಟು ಅದೃಷ್ಟಶಾಲಿಯದು ಎಂದಿದ್ದಾರಲ್ಲ "

"ನೀವು ಏನಾದರೂ ಹೇಳಿ ನನಗೆ ಆ ಹೆಣ್ಣು ಬೇಡಪ್ಪಾ" ಎಂದು ತನ್ನ ನಿರ್ಧಾರ ಹೇಳಿಬಿಟ್ಟ ವೆಂಕಟೇಶ

ಅದೇ ಸಮಯದಲ್ಲಿ ರಾಜಾರಾಯರು ಒಳಗೆ ಬಂದರು. ಕೋಪವನ್ನು ತಡೆದುಕೊಂಡು ನಾಗೇಶರಾಯರು "ಬನ್ನಿ ಸ್ವಾಮಿ ಕೂಡಿ" ಎಂದು ಆದರಿಸಿದರು

"ನಾಗೇಶರಾಯರೇ ನಿನ್ನೆ ಒಂದು ತಪ್ಪಾಯಿತು" ಎಂದು ಹೇಳುತ್ತ ಒಂದು ಅರಿಸಿನ ಹಚ್ಚಿದ ಕಾಗದವನ್ನು ತೆಗೆದುಕೊಟ್ಟು "ಇದು ನಮ್ಮ ಪದ್ಮಳ ಜಾತಕ ನಿನ್ನೆ ನಾನು ನಿಮಗೆ ಕೊಟ್ಟ ಜಾತಕ ಅವಳದಲ್ಲ ಅದು ಬೇರೆಯವಳದು, ಅವಸರದಲ್ಲಿ ತಪ್ಪಾಯಿತು ಅದನ್ನು ದಯವಿಟ್ಟು ಹಿಂದಕ್ಕೆ ಕೊಡಿ" ಎಂದರು ರಾಜಾರಾಯರು, ಬಹಳ ಅವಸರದಿಂದ

''ಅದು ಯಾರ ಜಾತಕಾ?'' ಎಂದು ನಾಗೇಶರಾಯರ ಪ್ರಶ್ನೆಗೆ ಉತ್ತರ ಬರುವ ಮುಂಚಿತವಾಗಿ ವೆಂಕಟೇಶನು—

''ಅಷ್ಟು ಗೊತ್ತಿಲ್ಲವೇ ಅಪ್ಪಾ, ಅವರ ಮನೆಯಲ್ಲಿದ್ದ ಅನಾಥೆ ಲಲಿತಳದು'' ಎನ್ನುತ್ತಿದ್ದಾರೆ. ಎಂದು ಹೇಳಿ ವೆಂಕಟೇಶ ರಾಜಾರಾಯರ ಮುಖ ನೋಡಿದ. ಅವರ ಮುಖದಲ್ಲಿ ಒಂದು ಹನಿ ರಕ್ತವೂ ಇಲ್ಲದಿದ್ದುದು ಅವ

ನಿಗೆ ಸಂತೋಷವನ್ನುಂಟುಮಾಡಿತು. "ಆ ಹೆಣ್ಣಿನ ಜಾತಕ ನಿಮ್ಮಲ್ಲಿ ಹೇಗೆ ಬಂತು" ನಾಗೇಶರಾಯರು ಕೇಳಿಯೇಬಿಟ್ಟರು "ಅದು... ಅದು... ಅವಳು ನನಗೆ ಕೊಂಚ—ಆದೇಕೆ ಬಹುದೂರದ ಬಂಧು" ಎಂದು ಉಗುಳು ನುಂಗಿದರು ರಾಜಾರಾಯರು. ಅಷ್ಟರಲ್ಲಿ ವೆಂಕಟೇಶನು ''ಏನು ರಾಯರೇ, ದೂರದ ಬಳಗವೇನು? ಅವಳು ನಿಮ್ಮ ತಂಗಿಯ ಮಗಳೆಂದು ಸ್ಪಷ್ಟವಾಗಿ ಹೇಳಿಬಿಡಿ. ವಿದ್ವಾನ್ ನಾರಾಯಣರಾಯರ ಮಗಳು ಲಲಿತ ತಾನೇ" ಎಂದ ವೆಂಕಟೇಶ. ರಾಜಾರಾಯರ ಮುಖದಲ್ಲಿ ಚಿವುಟಿದರೂ ಹನಿ ರಕ್ತವಿಲ್ಲದಂತಾಯಿತು. ವೆಂಕಟೇಶನು ಮೆಲ್ಲಗೆ ಎಲ್ಲ ಸಮಾಚಾರವನ್ನೂ ತನ್ನ ತಾಯಿಗೆ ತಿಳಿಸಿದ. ಸುಂದರಮ್ಮನೂ ನಾಗೇಶರಾಯರನ್ನು ನೋಡಿ ''ಇಲ್ಲಿ ನೋಡಿ ಸುಮ್ಮನೆ ಆ ಹೆಣ್ಣಿಗೆ ನಿಶ್ಚಯಿಸಿಬಿಡಿ. ನನಗೆ ಸರಿಹೋಗಿದೆ ವೆಂಕಟೇಶನಿಗೂ ಒಪ್ಪಿಗೆ ಇದೆ. ಜಾತಕವೂ ಸರಿಹೋಗಿದೆ. ಅವರಿಗೆ ಹೇಳಿ ನೋಡಿ" ಎಂದರು.

''ಪದ್ಮಳ ಜಾತಕವನ್ನೂ ಜೋಯಿಸರಿಗೆ ತೋರಿಸೋಣ. ಆ ಹೆಣ್ಣಿಗೆ ತಾಯಿ-ತಂದೆ ಇಲ್ಲ ಆಸ್ತಿ ಇಲ್ಲ, ಏನೂ ಇಲ್ಲ'' ''ಇದು ಏನಪ್ಪಾ ನಿಮ್ಮ ತಮಾಷೆ, ಸ್ವಲ್ಪ ಮುಂಚೆ ನೀವು ಹೇಳಿದಿರಲ್ಲ, ಇದು ಅದೃಷ್ಟಪೂರ್ಣವಾದ ಜಾತಕ, ಹೆಣ್ಣು ಬಡವರದಾಗಿದ್ದರೂ ಇದನ್ನೇ ನಿಶ್ಚಯಿಸುವೆನೆಂದು ಅದೃಷ್ಟ ಜಾತಕವನ್ನು ಎಂದಿಗೂ ಕೈಬಿಡಬಾರದು'' ಎಂದು ವೆಂಕಟೇಶ ತಂದೆಯವರಿಗೆ ಎಚ್ಚರಿಕೆ ಕೊಟ್ಟ.

ವೆಂಕಟೇಶನ ಹಟದಿಂದಲೂ ಸುಂದರಮ್ಮನವರ ಉತ್ತೇಜನದಿಂದಲೂ, ನಾಗೇಶರಾಯರು, ರಾಜಾರಾಯರೊಂದಿಗೆ ಈ ಮಾತನ್ನು ಪ್ರಸ್ತಾಪಿಸಿದರು. ಅವರಿಗೇನೂ ಆಕ್ಷೇಪ ಇಲ್ಲವೆಂದು ತಿಳಿಯಿತು. ಹೇಗಾದರೂ ಖರ್ಚಿಲ್ಲದಿದ್ದರಾಯಿತಲ್ಲವೇ?

''ನನಗೂ ಗೊತ್ತಿತ್ತು. ಲಲಿತಳ ಜಾತಕ ಅದೃಷ್ಟ ಜಾತಕ ಅಂತ. ಈ ಆಕಸ್ಮಿಕ ನಿರ್ಣಯವೇ ಕೊನೆಯದಾಗಲಿ'' ಎಂದು ರಾಜಾರಾಯರು ನಗುತ್ತ ಹೊರಟರು.

''ಅಪ್ಪಾ ಇಂದು ಶುಕ್ರವಾರ'' ಎಂದು ತಂದೆಯ ಗಮನಕ್ಕೆ ಮತ್ತೆ ತಂದ ವೆಂಕಟೇಶ. ಅಂತೂ ಮುಂದೆ ಹತ್ತು ದಿವಸಗಳ ಶುಭ ದಿನದಲ್ಲಿ ವೆಂಕಟೇಶ ಸಭ್ಯಗೃಹಸ್ಥನಾದ.

ಈ ವಿವಾಹದಲ್ಲಿ ಸಂತೋಷವಿಲ್ಲದ ವ್ಯಕ್ತಿ ಎಂದರೆ ರಾಧಮ್ಮನವರೇ. ಅವರಿಗೆ ಲಲಿತೆಯಂತಹ ಆಳು ಮತ್ತೆಲ್ಲಿ ಸಿಗಬೇಕು?

# ರಸಿಕತೆಯ ನಿರ್ಣಯ



"ವಿಮಲಾ, ನಿನಗೆ ಒಂದು ಸಮಾಚಾರ ಹೇಳುತ್ತೇನೆ ಬಾ ಇಲ್ಲಿ" ಎಂದು ಶ್ರೀಪತಿರಾಯರು ತಮ್ಮ ಮಗಳನ್ನು ಕರೆದರು.

"ಏನಪ್ಪಾ ಸಮಾಚಾರ" ಎಂದು ಕೇಳುತ್ತ ವಿಮಲಾ ತನ್ನ ತಂದೆಯ ಕೋಣೆಯಲ್ಲಿ ಬಂದು ಕುಳಿತಳು

'ನಾನು ಹೀಗೆ ಹೇಳುತ್ತಿದ್ದೆನೆಂದು ಬೇರೆ ತಿಳಿಯಬೇಡ '

'ಇಲ್ಲವಪ್ಪ '

"ನಿನ್ನ ಸ್ನೇಹಿತ ಶ್ರೀಧರ ಇದ್ದಾನಲ್ಲಾ, ಅವನ ನಡವಳಿಕೆಗಳು ನನಗೆ ತೃಪ್ತಿಕರವಾಗಿ ಇಲ್ಲವೇ ಇಲ್ಲ ಅನ್ನು "

'ಹಾಗೆಂದರೆ–ನನಗೆ ತಿಳಿಯಲಿಲ್ಲ.'

'ಅವನಿಗೆ ನಿನ್ನನ್ನು ಮದುವೆ ಮಾಡಿಕೊಡುವುದರ ಬಗ್ಗೆ ನಾನೂ ಇನ್ನೂ ಯಾವ ತೀರ್ಮಾನಕ್ಕೂ ಬಂದಿಲ್ಲ '

'ಏತಕ್ಕಾಗಿ? ಅವರಿಗೆ, ಕಡಿಮೆಯಾದರೂ ಏನು?"

'ನನ್ನ ನಿಯಮ ನಿನಗೆ ತಿಳಿದಿದೆ ವಿಮಲಾ, ನೀನು ಕನ್ನಡದ ಬಗ್ಗೆ ಭಾಷಾಭಿಮಾನ ಇರುವವನನ್ನು ಮಾತ್ರ ವರಿಸು. ನನ್ನ ಅಳಿಯನಾಗುವವನು ಕನ್ನಡದಲ್ಲಿ ವಿದ್ವಾಂಸನಾಗಿರದಿದ್ದರೂ, ಕನ್ನಡ ಭಾಷೆಯಲ್ಲಿ ಆದರ, ಪ್ರೇಮ ಉಳ್ಳವನೂ ರಸಿಕನೂ ಆಗಿರಬೇಕು. ಅದು ಮುಖ್ಯವಾದುದು.

"ಹಾಗಾದರೆ ಶ್ರೀಧರನು ಅರಸಿಕನೆಂದು ತಿಳಿದಿರುವಿರೇನು?"

"ಅವನ ರಸಿಕತೆ ನಾನು ಕಂಡಹಾಗೇ ಇದೆ. ಅವನಿಗೇನೂ ಗೊತ್ತಿಲ್ಲ "

"ಏಕೆ ಗೊತ್ತಿಲ್ಲ? ನೀವು ಬೇಕಾದರೆ ಅವರನ್ನು ಪರೀಕ್ಷೆ ಮಾಡಬಹುದು, ಆಗ ತಿಳಿಯುತ್ತದಲ್ಲಾ ಅವರ ರಸಿಕತೆ ನಿಮಗೆ ತಾನೇ ಅರ್ಥವಾಗುವದು, ಅವರ ರಸಿಕತೆಗೆ ಮಿತಿಯೇ ಇಲ್ಲ "

"ಸರಿ. ಅದನ್ನು ನಾಳೆಯೇ ಪರೀಕ್ಷೆ ಮಾಡಿಬಿಡುತ್ತೇನೆ. ಅವನು ಜಯಹೊಂದಿದರೆ ಬರುವ ವಾರವೇ ವಿವಾಹ ನಿಶ್ಚಯ "

"ಚನ್ನಾಗಿ ಪರೀಕ್ಷೆ ಮಾಡಿ, ..ಹೌದು. ಹೇಗೆ ಪರೀಕ್ಷೆ ಮಾಡಲಿರುವಿರಿ?"

"ಮೊದಲು ಜೈಮಿನಿ ಭಾರತದ ಒಂದು ಪದ್ಯವನ್ನು ಹೇಳುತ್ತೇನೆ. ಜೈಮಿನಿ ಭಾರತವನ್ನು ಅವನು ಓದಿದ್ದರೆ ತಕ್ಷಣ ಅವನು ಅದು ಯಾರು ಬರೆದುದೆಂದು ಹೇಳಿಬಿಡುವನು.''

"ಮುಂದೆ"

"ವಚನಗಳಲ್ಲಿ ಒಂದು ವಚನ ನುಡಿಯುತ್ತೇನೆ."

"ಅನಂತರ—?"

"ಬೇಂದ್ರೆಯವರ ಒಂದು ಕವಿತೆಯನ್ನೂ, ಕೆ ಎಸ್ ನರಸಿಂಹಸ್ವಾಮಿಯವರ ಒಂದೊಂದು ಕವಿತೆ ಅನ್ನುವೆ. ಕನ್ನಡವನ್ನೂ ಓದಿದವನಾಗಿದ್ದಲ್ಲಿ, ಆ ಮಟ್ಟಿನಿಂದಲೂ, ಆ ಧಾಟಿಯಿಂದಲೂ, ಯಾರು ಬರೆದುದು ಎಂಬುದನ್ನು ಹೇಳಿಬಿಡುವನಲ್ಲವೆ? ಏನು, ಹೇಗಿದೆ ನನ್ನ ಯೋಚನೆ?"

'ಎಲ್ಲವೂ ಸರಿಯಾಗಿದೆಯಪ್ಪಾ, ನಿಜವಾಗಿಯೂ ಇದು ಒಳ್ಳೆಯ ಪರೀಕ್ಷೆ. ನಾಳೆ ಅವರನ್ನು ಕರೆಯಿಸಿ ಪರೀಕ್ಷೆ ಮಾಡಿಬಿಡಿ "

ಮೇಲೆ ಹೇಳಿದ ಸಂಭಾಷಣೆ ಮುಗಿದುದೇ ತಡ, ವಿಮಲಾ ತನ್ನ ಪ್ರೀತಿಯ ಶ್ರೀಧರನನ್ನು ಫೋನಿನಲ್ಲಿ ಕರೆದಳು.

"ಹಲೋ..... ..''

ಯಾರು "ಶ್ರೀಧರನೇನು?''

"ಆ ಶ್ರೀಧರ"

"ಇಗೋ ನೋಡು ಶ್ರೀಧರ, ನಮ್ಮ ಫಾದರ್, ನಿಮಗೆ ಒಂದು ಪರೀಕ್ಷೆ ಇಡುತ್ತಾರಂತೆ– ಅದರಲ್ಲಿ ಉತ್ತೀರ್ಣರಾದರೆ ಮಾತ್ರ ನನ್ನ ನಿಮ್ಮ ಅಂತೆ"

"ಅದು ಎಂತಹ ಪರೀಕ್ಷೆ ವಿಮಲಾ? ಇದೇನೋ ಹಂಸಪಾದು ಹಾಕಿದರಲ್ಲ ನಿಮ್ಮ ಡ್ಯಾಡಿ." ಅವನ ಧ್ವನಿಯಿಂದ ಅವನು ಭಯಗೊಂಡಂತೆ ವಿಮಲಳಿಗೆ ಕಂಡುಬಂತು.

"ನಿಮಗೆ ಕನ್ನಡ ಕಾವ್ಯಗಳ ರಸಾನುಭವವಿದೆಯೋ ಹೇಳಿ''

"ಕನ್ನಡವೆ! ಅಯ್ಯಯ್ಯೋ–ಕನ್ನಡವೆಂದರೆ ನನಗೆ ತಲೆನೋವು ಎಂದು ನೀನರಿಯೆಯಾ ವಿಮಲಾ? ನಾನು B. A. ದಲ್ಲಿ ಫೇಲಾದುದೂ ಕನ್ನಡದಲ್ಲೇ. ಒಂದು ಪುಸ್ತಕವಾದರೂ ಓದಿಲ್ಲವಲ್ಲಾ, ಹೇಗೆ ಮಾಡಲಿ?

"ಹಾಗಾದರೆ ನೀವು ನನ್ನನ್ನು ಮದುವೆ ಮಾಡಿಕೊಳ್ಳಲಾಗುವುದಿಲ್ಲ.''

''ಅಯ್ಯಯ್ಯೋ! ಹಾಗಾದರೆ ಇನ್ನೇನು ಗತಿ?"

"ಕನ್ನಡ ಕಾವ್ಯ ಸಾಹಿತ್ಯವನ್ನರಿತವರೇ ತಮಗೆ ಅಳಿಯರಾಗಿ ಬರಬೇಕಂತೆ. ಅದಕ್ಕಾಗಿ ಅವರು ಒಂದು ಪರೀಕ್ಷೆ ಇಡುವರಂತೆ."

"ಅಯ್ಯೋ ರಾಮಚಂದ್ರ."

"ಆದರೆ ಅದಕ್ಕೆ ಒಂದು ಹಾದಿ ಇದೆ."

"ಏನದು?"

"ನಾನು ಹೇಳುವಂತೆ ನೀವು ಅವರಿಗೆ ಪರೀಕ್ಷೆಯಲ್ಲಿ ಉತ್ತರ ತಿಳಿಸಿದರೆ ಪರೀಕ್ಷೆ ಪಾಸ "

"ಹಾಗೇ ಆಗಲಿ ವಿಮಲಾ, ನಿನಗಾಗಿ ನಾನು ಏನಾದರೂ ಮಾಡಬಲ್ಲೆ."

"ಒಂದಕ್ಕೊಂದು ಹೇಳಿಬಿಟ್ಟರೆ ಅನಂತರ ಕಷ್ಟವೇ ಸರಿ—! ಮೊದಲು ಜೈಮಿನಿ ಭಾರತದ ಪದ್ಯ, ಅನಂತರ ಬಸವಣ್ಣನವರ ವಚನ, ಮುಂದೆ ಬೇಂದ್ರೆಯವರ ಕವಿತೆ, ಆ ಮೇಲೆ ಕೆ. ಎಸ್. ನರಸಿಂಹಸ್ವಾಮಿಯವರದು ಹೇಳುವರು—"

"ಏನೇನು—ಜೈಮಿನಿ ಭಾರತ, ಬಸವಣ್ಣ, ನಂತರ ಬೇಂದ್ರೇ, ಇಷ್ಟೇ ತಾನೇ? ನಾನು ಪಾಸಾಗುತ್ತೇನೆ. ನೀನು ಕಾಳಜಿ ಬಿಟ್ಟುಬಿಡು."

ಮರುದಿನ ಶ್ರೀಪತಿರಾಯರು, ಶ್ರೀಧರನನ್ನು ಕರೆದು ಒಂದೊಂದು ಹಾಡುಗಳಂತೆ ಹಾಡಿ ತೋರಿಸಿದರು.

ಶ್ರೀಧರನೂ "ಆಹಾ-ಏನು ಜೈಮಿನಿ, ಅವನು ಬರೆದ ಭಾರತ ನಿಜವಾದ ಕಾವ್ಯವಲ್ಲವೆ?" ಎಂದ ಶ್ರೀಪತಿರಾಯರ ಮುಖ ಸಂತೋಷದಿಂದ ಅರಳಿತು. ಅಡಿಗೆಮನೆಯ ಕಟ್ಟಿನಲ್ಲಿ ನಿಂತಿದ್ದ ವಿಮಲಳೂ ಸಂತೋಷಬಟ್ಟಳು.

ಶ್ರೀಪತಿರಾಯರು ಎರಡನೆಯ ಹಾಡು ಹಾಡಿದೊಡನೆಯೇ ಶ್ರೀಧರನೂ "ಆಹಾ, ಬಸವಣ್ಣನ ವಚನ ಕೇಳಿದರೆ ಈ ಇಹವೇ ಮರೆತುಹೋಗುತ್ತದೆ" ಎಂದ

ಮೂರನೆಯ ಹಾಡಿಗೂ ಅದೇ ಸಾಹಸ "ಬೇಂದ್ರೆಯವರ ಕವನ ಕಲ್ಲುಸಕ್ಕರೆ ಪಾನಕ ಕುಡಿದಂತೆ ಏನು ಅರ್ಥಗಾಂಭೀರ್ಯ, ಏನು ಪ್ರಾಸ" ಎಂದ. ಶ್ರೀಪತಿರಾಯರು ನಕ್ಕು ಸುಮ್ಮನಾದರು. ಮರೆಯಲ್ಲಿ ನಿಂತು ಇದನ್ನೆಲ್ಲ ಕೇಳುತ್ತಿದ್ದ ವಿಮಲಾ ಚಿಟ್ಟನೆ ಚೀರಿದಳು.

ಚೀರದೆ ಏನು ಮಾಡಿಯಾಳು ಪಾಪ? ಕೊನೆಯಲ್ಲಿ ಶ್ರೀಪತಿರಾಯರು ಹಾಡಿದುದು ಬೇಂದ್ರೆಯವರ ಕವನವಲ್ಲ. ಅದೇ ಧಾಟಿಯಲ್ಲಿ ತಾವು ರಚಿಸಿದ ಒಂದು ಕವನ. ಆದ್ದರಿಂದ ಶ್ರೀಪತಿಯ ಬಗ್ಗೆ ಕೀಳಾದ ಅಭಿಪ್ರಾಯ ವುಂಟಾಗುವುದಲ್ಲದೆ ಬೇರೆ ಇಲ್ಲ, ಅಲ್ಲವೇ? ಆದ್ದರಿಂದಲೇ ವಿಮಲಾ ಗಾಬರಿಯಾದಳು 'ಬೇಂದ್ರೆಯವರ ಕವನಗಳನ್ನರಿಯದ ಮೂಢ ಎಂದು ಅವರು ತಿಳಿಯುವರಲ್ಲವೇ?

"ಅಯ್ಯೋ, ಪಾಪ, ಶ್ರೀಧರನದೇನು ತಪ್ಪು? ನಾನು ಹೇಳಿಕೊಟ್ಟಂತೆ ಅವನು ಹೇಳಿದ ತಟ್ಟನೆ ತಂದೆಯವರು ಬೇಂದ್ರೆಯವರ ಕವನದ ಬದಲಾಗಿ ತಮ್ಮ ಕವನವನ್ನೇ ಹೇಳುವರೆಂದು ಅವನಿಗಾದರೂ ಹೇಗೆ ಗೊತ್ತು?" ಎಂದು ಬಹಳ ಚಿಂತೆಗೀಡಾದಳು ವಿಮಲಾ

ಆದರೆ ಏನಾಶ್ಚರ್ಯ! ಶ್ರೀಪತಿರಾಯರು ಸಂತೋಷಿಸಿದುದನ್ನು ಕಂಡು ವಿಮಲಾನೇ ಗಾಬರಿಯಾದಳು 'ವಿಮಲಾ, ನಿನ್ನ ಶ್ರೀಧರ ನಿಜವಾಗಿಯೂ ರಸಿಕ, ಬೇಂದ್ರೆಯವರ ಕವನದಂತೆ ನನ್ನದೇ ಒಂದು ಕವನವನ್ನು ಅಂದೆ ಆದನ್ನು ಬೇಂದ್ರೆಯವರ ಕವನವೇ ಎಂದು ಹೇಳಿಬಿಟ್ಟ ಕವನದ ಜೋಡಣೆಯನ್ನನುಸರಿಸಿ ಬರೆದವರನ್ನು ತಿಳಿಯುವದು ಸಾಮಾನ್ಯರಿಂದ ಸಾಧ್ಯವೇ? ಬರುವ ವಾರವೇ ಮುಹೂರ್ತ ನಿಶ್ಚಯಮಾಡಿ ಬಿಡುವ. ಶ್ರೀಧರ ನಿಜವಾಗಿಯೂ ನಿನಗೆ ತಕ್ಕ ವರ.' ಎಂದು ಹೇಳಿ ಶ್ರೀಧರನ ಬೆನ್ನು ಚಪ್ಪರಿಸಿದರು. ವಿಮಲಾ ತುಟಿ ಚಪ್ಪರಿಸಿದಳು ಮತ್ತು ಆ ದಿನಕ್ಕೆ ಆರನೆಯ ದಿನದಲ್ಲಿ ಬಂದ ಅತಿಥಿಗಳು ಮದುವೆ ಪಕ್ವಾನ್ನ ತಿಂದು ನೋಡಿ ಬಾಯಿ ಚಪ್ಪರಿಸಿದರು ಮತ್ತೇನು ಬೇಕು?

# ಮಾನುಷ ಯಂತ್ರ



"ಇಂದ್ರಜಾಲ ಮಹೇಂದ್ರಜಾಲಗಳೆಂದರೆ ನನಗೆ ನಂಬಿಕೆಯೇ ಇಲ್ಲ ಅವೆಲ್ಲವೂ ಇವೆ, ಆದರೆ ಎಲ್ಲಕ್ಕೂ ಮಿಗಿಲಾಗಿ ಒಂದಿದೆ. ಅದು ನಿಮ್ಮ ಊಹೆಗೆ ಮಿಂಚಿದುದಾಗಿದೆ. ಅದನ್ನು ನಂಬಲೇಬೇಕು" ಎಂದು ರಾಜಾ ರಾಯರು ದಡ ದಡ ಹೇಳಿ ಮುಗಿಸಿದರು ಇದಕ್ಕೆ ಕಾರಣ ನಾವು ಅಂದು ನೋಡಿದ ಅದ್ಭುತ ದೃಶ್ಯಗಳೇ. ಸರ್ಕಸ್ಸಿನಲ್ಲಿ ನಾವು ನೋಡಿದ ದೃಶ್ಯಗಳು ನನ್ನನ್ನೇ ಬೆರಗುಗೊಳಿಸಿದ್ದವು

ಬಾಲ್ಯದಿಂದಲೂ ನಾನು ಸರ್ಕಸ್ಸುಗಳನ್ನು ನೋಡುತ್ತ ಬಂದಿದ್ದೇನೆ, ನೀವೂ ನೋಡಿರಲಿಕ್ಕೆ ಸಾಕು. ಆದರೆ ರಾಜಾರಾಯರು ಮೇಲೆ ಹೇಳಿದ ಮಾತಿನಿಂದ ನನಗೆ ಆಶ್ಚರ್ಯವೇ ಆಯಿತು. ಇದರ ಸತ್ಯವನ್ನು ಹೇಗಾದರೂ ಹೊರಗೆಡಹಲೇಬೇಕೆಂದುಕೊಂಡೆ

ಹೊಳೆ ಹೊಳೆವ ಉಡುಪಿನಲ್ಲಿದ್ದ ಓರ್ವ ಯುವತಿಯು ರಂಗದ ಮೇಲೆ ಅಣಿಯಾಗಿ ನಿಲ್ಲಿಸಿದ್ದ ಹಲಗೆಗೆ ಆತು ನಿಂತಳು ಪ್ರೇಕ್ಷಕರಿಗೆ ಒಂದು ಕಿರುನಗೆಯನ್ನಿತ್ತು ಅವಳು ಸಲಾಂ ಮಾಡಿದಳು ಸುಂದರಿಯಾದ ಅವಳು ನೀಲ ಬಣ್ಣದ ಒಂದು ಗೌನನ್ನು ಧರಿಸಿದ್ದಳು. ಅದರ ಜರತಾರಿ ಅಂಚುಗಳು ದೀಪದ ಬೆಳಕಿನಲ್ಲಿ ಹೊಳೆದು ಅವಳ ಸೌಂದರ್ಯವನ್ನು ಇಮ್ಮಡಿಸುತ್ತಲಿತ್ತು.

ಕೈಗಳೆರಡನ್ನು ತಲೆಯಮೇಲಿಟ್ಟುಕೊಂಡಳು. ನಡು ನಡುವೆ ಕಿರುನಗೆ. ಒಳ್ಳೆಯ ದೃಢಕಾಯನಾದ ಓರ್ವನು ಅವಳೆದುರಿನಲ್ಲಿ ಬಂದು ನಿಂತ ಚೊಕ್ಕಾಗಿ. ಅವನು ಧರಿಸಿದ ವಸ್ತ್ರಗಳು ಅವನೋರ್ವ ವ್ಹೇಂಥನೆಂಬುದನ್ನು ಎತ್ತಿ ತೋರಿಸುತ್ತಲಿದ್ದವು ಅವನ ಮುಖದಲ್ಲಿ ಸಂತೋಷವಿದ್ದಿಲ್ಲ. ಅವನ ಕೈಯಲ್ಲಿ ಹತ್ತು ಹನ್ನೆರಡು ಕಠಾರಿಗಳಿದ್ದವು. ಅವನ ಕೈಯಲ್ಲಿಯ ಆ ಕಠಾರಿಗಳು ಕೊಲೆಯ ಪ್ರಯತ್ನವನ್ನು ಸೂಚಿಸುತ್ತಿದ್ದವು. ಅವನೂ ಪ್ರೇಕ್ಷಕರಿಗೆ ಸಲಾಂ ಮಾಡಿ ಸ್ವಲ್ಪ ಹೊತ್ತು ಆ ಕಠಾರಿಗಳನ್ನು ಗಾಳಿಯಲ್ಲಿ ತೂರಿ ತೋರಿಸಿದ. ಅವನು ಅವಳನ್ನೇ ದಿಟ್ಟಿಸಿ ನೋಡುತ್ತಲಿದ್ದನು ಅವಳು ತಿರಸ್ಕಾರದ ನಗುವಿನಿಂದ ಅವನನ್ನು ನೋಡುತ್ತಲಿದ್ದಳು.

ಒಂದು ಕಠಾರಿಯನ್ನು ಮಾತ್ರ ಕೈಯಲ್ಲಿ ತೆಗೆದುಕೊಂಡು ಮಿಕ್ಕವುಗಳನ್ನು ಅಲ್ಲಿಯೇ ಇದ್ದ ಮೇಜಿನ ಮೇಲಿಟ್ಟು ಹೆಣ್ಣನ್ನು ದಿಟ್ಟಿಸಿ ನೋಡಿದ ಅವಳೂ ನಕ್ಕಳು. ತಟ್ಟನೆ ಹೆಣ್ಣಿನ ತಲೆಗೆ ಗುರಿಯಿಟ್ಟು ಕಠಾರಿಯನ್ನು ಬೀಸಿದ ಅದು ಅವಳ ತಲೆಯ ಮೇಲೆ ಹಾಯ್ದು ಹಲಗೆಗೆ ಚುಚ್ಚಿಕೊಂಡಿತು. ಅವಳಿಗೆ ಇದರಿಂದ ಆಶ್ಚರ್ಯವಾಗಲಿ, ಭಯವಾಗಲಿ ಉಂಟಾಗಲಿಲ್ಲ ಮುಂದೆ ಅವಳು ಹಲಗೆಯ ಮೇಲೆ ತೋರಿದ ಸ್ಥಳಗಳಿಗೆ ಸರಿಯಾಗಿ ಯುವಕನ ಕೈಯಿಂದ ಮಿಂಚಿನ ವೇಗದಲ್ಲಿ ಕಠಾರಿಗಳು ಹಾರಿದವು ಒಂದು ಎಳೆ ಸರಿದರೆ ಅವು ಅವಳ ದೇಹವನ್ನು ಸೇರುತ್ತಿದ್ದವು ಪ್ರೇಕ್ಷಕರಲ್ಲಿ ನಿಶ್ಶಬ್ದತೆ ಆವರಿಸಿತು ಆದರೆ ಕ್ಷಣದಲ್ಲಿಯೇ ಅವರ ಕರಘೋಷವು ಆ ನಿಶ್ಶಬ್ದವನ್ನು ಕಲುಕಿತು.

ಕಠಾರಿಗಳು ಮತ್ತೆ ತೆಗೆಯಲ್ಪಟ್ಟವು ಯುವಕನ ಕಣ್ಣುಗಳು ಕಟ್ಟಲ್ಪಟ್ಟವು ಮತ್ತೊಮ್ಮೆ ಅವನು ಯುವತಿಯು ತಿಳಿಸಿದ ಸ್ಥಳಗಳಿಗೆ ಸರಿಯಾಗಿ ಬೀಸಿದ ಕಣ್ಣಿನ ಪಟ್ಟಿ ಬಿಚ್ಚಿದ ಮೇಲೆ ಯುವತಿಯು ಅವನನ್ನು ನೋಡಿ ಮತ್ತೊಮ್ಮೆ ಅಲಕ್ಷ್ಯದ ನಗು ನಕ್ಕಳು ಅವನ ಮುಖದಲ್ಲಿ ಕೋಪ ಮತ್ತು ನಿರಾಶೆಗಳು ತುಂಬಿ ಹರಿದವು

ಈ ಅದ್ಭುತ ದೃಶ್ಯವು ನನ್ನ ಮನಸ್ಸನ್ನು ಸ್ವಲ್ಪ ಕಲಕಿತು ಇದನ್ನು ಆ ಯುವಕನು ಹೇಗೆ ಪೂರೈಸಿರಬಹುದು? ತನ್ನ ಮನಸ್ಸಾಕ್ಷಿಗೆದುರಾಗಿ ಓರ್ವ ಸುಂದರ ಯುವತಿಯನ್ನು ಯಾವ ಕ್ಷಣದಲ್ಲಾದರೂ ಮೃತ್ಯುವಿನ ಬಾಯಿಗೆ ತಳ್ಳಲು ಅವನ ಮನಸ್ಸಾದರೂ ಹೇಗೆ ಒಡಂಬಟ್ಟಿತು ಎಂಬುದೇ ನನ್ನನ್ನು ಗೊಂದಲದಲ್ಲಿ ಕೆಡವಿತು ಇದರಲ್ಲಿರುವ ರಹಸ್ಯವೇನು ಎಂಬುದನ್ನರಿಯಲು ನನ್ನ ಮನಸ್ಸು ಹಾತೊರೆಯುತ್ತಿತ್ತು

ಮರುದಿನ ಪ್ರಾತಃಕಾಲ ಆ ಯುವಕನನ್ನು ಸಮಕ್ಷಮ ಭೆಟ್ಟಿಯಾದೆ ನನ್ನನ್ನು ಆದರದಿಂದ ಬರಮಾಡಿಕೊಂಡು ಅವನು ಉಪಚರಿಸಿದ. ಅವನ ಮುಖದಲ್ಲಿ ಮಾತ್ರ ಶೋಕವು ತುಂಬಿತ್ತು ಕೊಂಚ ಕಾಲ ಅವನೊಡನೆ ಆ ಮಾತು ಈ ಮಾತು ಆಡುತ್ತಲಿದ್ದು ನನ್ನ ಮನಸ್ಸಿನಲ್ಲಿಯ ಸಂಶಯವನ್ನು ಹೇಳಿದೆ.

"ಇದರಲ್ಲಿ ಅಂತಹ ರಹಸ್ಯವೇನೂ ಇಲ್ಲವಲ್ಲ? ಸ್ವಲ್ಪ ಮನೋಧೈರ್ಯವೂ, ಅಭ್ಯಾಸವೂ ಇದ್ದರೆ ಸಾಕು'' ಎಂದ. ನನಗೆ ತೃಪ್ತಿಯಾಗಲಿಲ್ಲ. ಅವನು ಯಾವುದನ್ನೋ ಮುಚ್ಚಿಟ್ಟು ಮಾತನಾಡುತ್ತಲಿರುವನೆಂದು

ನೆನೆದೆ ಅವನಿಗೆ ಆ ವೃತ್ತಿಯಲ್ಲಿದ್ದ ಯಶಸ್ಸನ್ನು ಕುರಿತು ಹೊಗಳಿದಾಗ ಮಾತ್ರ ಅವನಿಗೆ ಕೋಪಬಂತು.

"ಜಯವೇ, ಯಾರಿಗೆ! ಜಯವೇ ಇಲ್ಲ, ಅಪಜಯವೇ ಸರಿ" ಎಂದು ಗರ್ಜಿಸಿದ. ನಾನೂ ಮಾತನಾಡಲಿಲ್ಲ 'ಇದು ನನ್ನ ಶಕ್ತಿಯೇ ಅಲ್ಲ; ಈ ಶಕ್ತಿಯು ನನಗೆ ಬೇಡ. ಹಲಗೆಗೆ ಆತು ನಿಂತವಳು ಬೇರಾರೂ ಅಲ್ಲ, ನನ್ನ ಪತ್ನಿ. ಅವಳ ತಿರಸ್ಕಾರದ ನಗೆಯನ್ನು ಕಂಡಿರಲ್ಲಾ' ಎಂದುಸುರಿದ.

"ಇದು ಏನೋ ಆಯಿತಲ್ಲಪ್ಪಾ. ಅವಳು ನಕ್ಕರೆ ನಾನು ಏನು ಮಾಡಲಿ'' ಎಂದು ಮನದಲ್ಲೇ ನೆನೆದು 'ಅಹುದು' ಎಂದೆ.

ಯುವಕನು ಮುಂದುವರಿದ. 'ಅದು ನನ್ನನ್ನು ಅವಮಾನಿಸುವ ನಗೆ. ಆ ನಗುವನ್ನು ಕಂಡರೆ ನನಗೆ ಆಗುವುದಿಲ್ಲ. ಗರ್ವಿಷ್ಠಳಾದ ಆ ಹೆಣ್ಣಿನ ಆ ನಗುವಿನಿಂದ ನನ್ನ ಎದೆಯನ್ನು ಚೂರಿಯಿಂದ ಇರಿದಂತಾಗುತ್ತದೆ.'

'ಏಕೆ' ಎಂದು ನಾನು ಕೇಳದೆಯೇ ಅವನು ಮತ್ತೆ ಆರಂಭಿಸಿದ.

"ಒಂದು ದಿನ ರಾತ್ರಿ ಉಲ್ಲಾಸವಾಗಿ ಕಾಲಕಳೆಯುತ್ತಲಿರುವಾಗ ಈ ವಿದ್ಯೆಯಲ್ಲಿ ನನಗೆ ಸಿಕ್ಕ ಅಪೂರ್ವ ಯಶಸ್ಸಿನ ಬಗ್ಗೆ ಹೇಳುತ್ತಲಿದ್ದೆ, ಅದನ್ನ ವಳು ಸಹಿಸಲಿಲ್ಲ ಗಂಡನ ಯಶಸ್ಸು ಹೆಂಡತಿಗೆ ಒಳ್ಳೆಯದೆ ಆದರೂ ಅವಳು ತನ್ನ ಯಶಸ್ಸನ್ನೇ ಕೋರುವವಳಲ್ಲವೇ? ಈರ್ವರೂ ಈ ಯಶಸ್ಸಿನಲ್ಲಿ ಸಮ ಭಾಗಿಗಳೆಂದು ನಮಗಾಗ ತೋರಲಿಲ್ಲ. ನನಗೆ ಕೋಪ ಬಂತು "

"ನಿನ್ನ ಜೀವ ನನ್ನ ಕೈಯಲ್ಲಿದೆ. ನನ್ನ ಮನಸ್ಸು ಸ್ವಲ್ಪ ಕೆಟ್ಟರೆ ನಿನ್ನ ಪ್ರಾಣಪಕ್ಷಿ ಹಾರಿಹೋಗಬಲ್ಲದು" ಎಂದೆ.

ಅವಳು ನಕ್ಕಳು "ನನ್ನ ಜೀವ ನಿಮ್ಮ ಕೈಯಲ್ಲಿ! ಹಾಗಾದರೆ ಕೈಯನ್ನು ಗಟ್ಟಿಯಾಗಿ ಮುಚ್ಚಿಕೊಳ್ಳಿ. ಇಲ್ಲವಾದರೆ ಹಾರಿಹೋಗಬಹುದು" ಎಂದು ನನ್ನನ್ನು ಪರಿಹಾಸ ಮಾಡಿದಳು

"ಅಲ್ಲೇ ಹುಚ್ಚಿ, ಕಠಾರಿಗಳನ್ನು ಬೀಸುವಾಗ ಸ್ವಲ್ಪ ಸರಿದನೆಂದರೆ ನಿನ್ನ ಗತಿ ಏನು''

"ಅದನ್ನೇ ಮಾಡಿನೋಡಿ'' ಎಂದು ಬಹು ಅಲಕ್ಷ್ಯವಾಗಿ ನಕ್ಕಳು. ಅವಳ ಆ ನಗುವಿನಲ್ಲಿ ಅವಹೇಳನವು ತಾಂಡವವಾಡುತ್ತಿತ್ತು.

"ನನ್ನ ಜೀವ ನಿಮ್ಮ ಕೈಯಲ್ಲಿಲ್ಲ; ನನ್ನ ದೇಹದಲ್ಲಿಯೇ ಇದೆ. ನೀವು ಏನಾದರೂ ಮಾಡಬಹುದು. ನಿಮ್ಮ ಕೈಚಳಕವನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬಹುದು.''

‘‘ಹಾಗಾದರೆ ಒಂದು ಕೈ ನೋಡಿಯೇ ಬಿಡುವ’’

‘‘ಒಂದು ಕೈ ಏಕೆ? ಎರಡೂ ಕೈ ಸೇರಿಸಿ ನೋಡಿ” ಎಂದು ಅಲಕ್ಷ್ಯ ವಾಗಿ ಹೇಳಿ ಹೊರಟುಹೋದಳು. ಇದಾದ ನಂತರ ನಾವು ಮಾತನಾಡು ತ್ತಿರಲಿಲ್ಲ ಸರ್ಕಸ್ಸಿನಲ್ಲಿ ಮಾತ್ರ ನಮ್ಮೀರ್ವರ ಭೆಟ್ಟಿ. ಅವಳ ಆ ಅಹಂಕಾ ರವನ್ನು ಅಡಗಿಸಬೇಕೆಂದು ತೀರ್ಮಾನಿಸಿದೆ

“ಮರುದಿನ ಕಠಾರಿಗಳು ಕೈಯಲ್ಲಿ ಬಂದವು ನನ್ನನ್ನು ನೋಡಿ ಅವಳು ಅವಹೇಳನದ ನಗು ನಕ್ಕಳು! ಕಠಾರಿಗಳನ್ನು ಸ್ವಲ್ಪ ಸರಿಸಿ ಬೀಸಿ ಅವಳನ್ನು ಘಾಯಗೊಳಿಸಬೇಕೆಂದು ತೀರ್ಮಾನಿಸಿ ಎಲ್ಲ ಕಠಾರಿಗಳನ್ನು ಬೀಸಿದೆ. ಆದರೆ ಅವು ಒಂದಾದರೂ ಅವಳನ್ನು ಘಾಯಗೊಳಿಸಲಿಲ್ಲ. ಗುರಿ ತಪ್ಪಿ ಬೀಸಲು ನಾನು ಅಶಕ್ತನಾದೆ ನನ್ನ ಸೋಲನ್ನು ನೋಡಿ ದಿನವೂ ನಗುತ್ತಲಿದ್ದಳು. ಪ್ರತಿದಿನವೂ ನನ್ನ ಕಠಾರಿಯು ಗುರಿ ತಪ್ಪುತ್ತಿರಲಿಲ್ಲ ಅವಳ ಆ ನಗುವು ನಿಲ್ಲುತ್ತಿರಲಿಲ್ಲ.’’

“ಹದಿನೆಂಟು ವರುಷದ ಅಭ್ಯಾಸದ ಶಕ್ತಿ ನನ್ನನ್ನು ನಿರ್ಜೀವವಾದ ಒಂದು ಯಂತ್ರವನ್ನಾಗಿ ಮಾಡಿತ್ತು. ಈ ಪ್ರಪಂಚದ ಸಾಮಾನ್ಯ ಮಾನವ ನಾಗಬೇಕೆಂದು ನಾನಾ ಪ್ರಯತ್ನಗಳನ್ನು ಮಾಡುತ್ತಲಿದ್ದೇನೆ, ಪ್ರಯೋಜನ ವಿಲ್ಲ ಯಂತ್ರಶಕ್ತಿ ನನ್ನ ಪ್ರತಿ ಅಂಗದಲ್ಲಿಯೂ ಮಿದುಳಿನಲ್ಲಿಯೂ ತುಂಬಿ ಹೋಗಿತ್ತು ಮನುಷ್ಯತ್ವವು ಮರೆಯಾಗಿ ಹೋಗಿತ್ತು. ಮನುಷ್ಯ ರೂಪ ದಲ್ಲಿ ನಾನೊಂದು ಯಂತ್ರದಂತಾದೆ ”

“ಈ ರಹಸ್ಯವನ್ನು ಅವಳು ಅರಿತಿರುವಳು ಅದರಿಂದಲೇ ಅವಳು ಪ್ರತಿ ದಿನವೂ ಹಾಗೆ ನಗುತ್ತಾಳೆ- ಆ ನಗುವನ್ನು ನಾನು ಹೇಗೆ ವಿಜಯವೆನ್ನಲಿ? ಪ್ರತಿ ದಿನವೂ ನನ್ನ ಈ ಮಾನುಷ ಯಂತ್ರಕ್ಕೆ ಜಯವೇ ಹೊರತು ‘‘ನನಗೆ” ಅಪಜಯವೇ! ಆ ನಗುವು ನನ್ನ ಅಪಜಯದ ಜಯ’’ ಎಂದು ಅವನು ಒಂದು ನಿಟ್ಟುಸಿರು ಬಿಟ್ಟ.

ಇದನ್ನು ಕೇಳಿದ ನನಗೆ ‘‘ಮೂರು ವರುಷದ ರೂಢಿ ನೂರು ವರುಷದ ವರೆಗೆ” ಎಂಬ ನಾಣ್ನುಡಿ, ನೆನಪಿಗೆ ಬಂತು, ಅವರ ಅಪ್ಪಣೆ ಪಡೆದು ಮನೆಗೆ ಹಿಂತಿರುಗಿದೆ.

# ಕರ್ತವ್ಯ



ಹುಬ್ಬಳ್ಳಿಯಲ್ಲಿಯ ಭಾಗ್ಯವಂತರ ಮನೆಗಳಲ್ಲಿ ದಿವಾನ ಬಹಾದ್ದೂರ ದೇಸಾಯರ ಮನೆ ಒಂದು ಇವರ ಮಗಳೇ ದಮಯಂತಿ ಸಣ್ಣ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡ ಇವಳು, ತಾಯಿಯ ಕೊರತೆ ಕಾಣದಂತೆ ದೇಸಾಯರಿಂದ ಬೆಳೆಸಲ್ಪಟ್ಟಿದ್ದಳು ದಮಯಂತಿಯ ಅಣ್ಣ ರಾಮಚಂದ್ರ, ಪ್ಲೀಡರ ವೃತ್ತಿಯಲ್ಲಿ ಪ್ರಖ್ಯಾತನಾಗಿದ್ದ ಅವನಿಗೆ ಸಂಪಾದಿಸಲೇ ಬೇಕೆಂಬ ಅವಶ್ಯಕತೆ ಇದ್ದಿಲ್ಲ. ತಂದೆಯ ಆಸ್ತಿ, ಮಕ್ಕಳ ಮೊಮ್ಮಕ್ಕಳು ತಿನ್ನುವವರೆಗೂ ಕರಗಿ ಹೋಗುವಂತಿದ್ದಿಲ್ಲ. ಆದರೂ ಸುಮ್ಮನೇ ಕೂಡಲಾರದೇ ಕೋರ್ಟಿಗೆ ಹೋಗಿಬರುತ್ತಿದ್ದ

ದಿವಾನ ಬಹಾದ್ದೂರರ ಅರ್ಧ ಆಸ್ತಿಗೆ ದಮಯಂತಿ ವಾರಸುದಾರಳು ಎಂದು ತಿಳಿದೊಡನೆ ಹುಬ್ಬಳ್ಳಿಯಲ್ಲಿಯ ಗಂಡು ಹಡೆದ ಧನವಂತರೆಲ್ಲರೂ ಅವಳನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದರು ಅದರಲ್ಲೂ ಹೆಣ್ಣು ಸುಂದರಿಯೆಂದೊಡನೆ, ಯಾವ ಹುಡುಗನಾದರೂ ಪ್ರೇಮ, ಗೀಮ ಎಂಬ ನೆವ ಹೇಳಬಿಡಲಾರನೆಂಬ ಧೈರ್ಯ ಅವರಲ್ಲಿ ಉಂಟಾಗಿತ್ತು. ಇಷ್ಟು ಜನರ ಆಶೆಗಳನ್ನು ದೂರಮಾಡಿ "ಮಹಾಗರ್ವಿ" ಎಂಬ ಪಟ್ಟವನ್ನು ಕಟ್ಟಿಕೊಂಡಿದ್ದಳು ದಮಯಂತಿ. ಅಷ್ಟೇ ಅಲ್ಲದೆ ಡಾಕ್ಟರ ಪ್ರಕಾಶನ ಮೇಲೆ ತನ್ನ ಪ್ರೇಮ ಕಟಾಕ್ಷವನ್ನು ಬೀರ ತೊಡಗಿದ್ದಳು

ಪ್ರಕಾಶನು ಸಾಧಾರಣನಾದ ಡಾಕ್ಟರ ಕ್ಲಾಸಿನಲ್ಲಿದ್ದಾಗ ಜಾಣನೆಂದು ಹೆಸರಾಗಿದ್ದನು ಇಷ್ಟೆ. ಸುಂದರ ರೂಪ, ಎತ್ತರಕ್ಕೆ ತಕ್ಕ ಆಕೃತಿ. ಆದರೆ ಎಲ್ಲರೂ ಅವನನ್ನು ''ಒಳ್ಳೆಯವ''ನೆಂದು ಹೇಳುತ್ತಿದ್ದರು. ಅವನ ವೈದ್ಯ ವೃತ್ತಿಯನ್ನು ಮೆಚ್ಚಿದ್ದರು. ''ಡಾಕ್ಟರ ಪ್ರಕಾಶರು ಹೇಳುತ್ತಾರೆ'' ಎಂದರೆ ಆ ಔಷಧಕ್ಕಾಗಲೀ ಆ ಮಾತಿಗಾಗಲೀ ಬಹಳ ಬೆಲೆ. ತಮಾಷೆಯಾಗಿ ಮಾತನಾಡಿ ತನ್ನಲ್ಲಿ ಬಂದವರನ್ನು ಉತ್ಸಾಹವಂತರಾಗಿ ಮಾಡುವವರಲ್ಲಿ ಅವನನ್ನು ಯಾರೂ ಮೀರಿಸುತ್ತಿರಲಿಲ್ಲ. ಅವನ ಮಾತಿನಿಂದಲೇ ವ್ಯಾಧಿಯು ಗುಣವಾಗುತ್ತಿತ್ತೋ ಅಥವಾ ಅವನ ಔಷಧದಿಂದ ರೋಗವು ಗುಣವಾಗು

ತ್ತಿತ್ತೋ ಹೇಳಲಾಗುತ್ತಿದ್ದಿಲ್ಲ. ಸಣ್ಣ ಕಾರೊಂದನ್ನು ಇಟ್ಟುಕೊಂಡು ಕರೆದವರ ಕರೆಗೆ ಮನ್ನಣೆ ಕೊಟ್ಟು ಹೋಗಿಬರುತ್ತಲಿದ್ದ.

ಪ್ರಕಾಶನು ಒಳ್ಳೆಯವನೆಂದು ಇಲ್ಲಿಯವರೆಗೂ ಹೇಳಿದವರೆಲ್ಲ, ದಮಯಂತೀ ಕಟಾಕ್ಷವು ಬಿದ್ದೊಡನೆ ಅದೃಷ್ಟವಂತ ಎಂದು ಹೇಳತೊಡಗಿದರು. ಪ್ರಕಾಶ-ದಮಯಂತಿಯರ ಭೆಟ್ಟಿ ಏನಂತಹ ಮಹತ್ವದ್ದಲ್ಲ ಪೂರ್ವದ ಪ್ರೇಮ ಕಥೆಗಳಲ್ಲಿಯ ಹಾಗೆಯೇ.

ಟೆನ್ನಿಸ ಕೋರ್ಟಿನಲ್ಲಿ ಒಂದು ದಿನ ದಮಯಂತಿಯ ಕಾಲು ಹೊರಳಿ ಬಹಳ ನೋವು ಉಂಟಾಯಿತು ಆಗ ಅಲ್ಲಿಯೇ ಆಡುತ್ತಿದ್ದ ಪ್ರಕಾಶ ಅವಳಿಗೆ ಪ್ರಥಮ ಚಿಕಿತ್ಸೆ ಮಾಡಿದ್ದ ಮಾಡುವಾಗ ಅವಳ ಕಾಲು ಇವನ ತೊಡೆಯಮೇಲಿತ್ತು. ಆ ಸಮಯದಲ್ಲಿ ದಮಯಂತಿ "ಇವನ ತೊಡೆಯ ಮೇಲೆ ನನ್ನ ತಲೆ ಇಟ್ಟುಕೊಳ್ಳುವ ಕಾಲ ಬರುವುದೋ" ಎಂದು ಚಿಂತಿಸಲಾರಂಭಿಸಿದಳಂತೆ.

ಮುಂದೆ ಆಗಾಗ್ಗೆ ಅವರೀರ್ವರೂ ಟೆನ್ನಿಸ ಆಡುವಾಗ ಭೆಟ್ಟಿಯಾಗುತ್ತಿದ್ದರು ಮತ್ತು ಪಂದ್ಯಾಟದಲ್ಲಿ ಜೋಡಿಯಾಗಿ ಆಡಿ ಪ್ರಖ್ಯಾತರಾದರು ಪರಸ್ಪರ ಪ್ರೇಮವೂ ಅವರನ್ನು ಆವರಿಸಿತು. ಒಂದೊಂದು ದಿನ ದಮಯಂತಿ ಅಣ್ಣನನ್ನು ಕರೆದುಕೊಂಡು ಪ್ರಕಾಶನ ಡಿಸ್ಪೆನ್ಸರೀಗೇ ಬರುತ್ತಿದ್ದಳು ಈ ಕಥೆ ಹೀಗಿರಲು ಹುಬ್ಬಳ್ಳಿಯ ಜನರು ಡಾಕ್ಟರ ಪ್ರಕಾಶರ ಅದೃಷ್ಟವನು ಕಂಡು ಮೂಗಿನ ಮೇಲೆ ಬೆರಳಿಟ್ಟರು ಒಂದೇ ಕಾಲದಲ್ಲಿ ಒಬ್ಬ ಡಾಕ್ಟರನಿಗೆ, ದೊಡ್ಡ ಆಸ್ತಿಗೆ ವಾರಸುದಾರಳಾಗಬಹುದಾದ ರತಿಯಂತಹ ಹೆಂಡತಿಯೂ, ಒಬ್ಬ ಧನವಂತ ಭಾವ ಮೈದುನನೂ ಸಿಕ್ಕಿದರೆಂದರೆ ಏಕೆ ತಾನೇ ಆಶ್ಚರ್ಯವಾಗುವುದಿಲ್ಲ?

ಆ ದಿನ ಸಂಜೆ ಆರು ಗಂಟೆಯಾಗಿರಬಹುದು. ಡಾಕ್ಟರ ಪ್ರಕಾಶನ ಕೋಣೆ ದಿನಕ್ಕಿಂತಲೂ ಬಹುಸುಂದರವಾಗಿ ಶೃಂಗರಿಸಲ್ಪಟ್ಟಿದ್ದಿತು.

ಡಾಕ್ಟರರು ಬಹು ಉತ್ಸಾಹದಿಂದ ಬೆನ್ನುಹಿಂದೆ ಕೈ ಕಟ್ಟಿಕೊಂಡು ಶಥಪಥ ತಿರುಗುತ್ತಿದ್ದರು.

"ಜೋಶಿ, ಇನ್ನು ಹತ್ತು ನಿಮಿಷಗಳಲ್ಲಿ ದಿವಾನ ಬಹದ್ದೂರರ ಮನೆಯಿಂದ ಕಾರು ಬರುತ್ತದೆ. ಅದರಲ್ಲಿ ದಮಯಂತಿ ಮಾತ್ರ ಬರುತ್ತಾಳೋ ಅಥವಾ ಅವಳ ಅಣ್ಣನೂ ಬರುತ್ತಾನೋ ಗೊತ್ತಿಲ್ಲ. ಅವರು ಬಂದೊಡನೇ ಒಳಗೆ ಕರೆದುಕೊಂಡು ಬರಬೇಕು.

"ಸರಿ ಸಾರ್"

"ನಾನು ಮಾತನಾಡುತ್ತಿರುವಾಗಲೇ ನೀನು ಹೋಗಿ ಹೊಟಲಿನಿಂದ ಒಳ್ಳೆಯ ಕಾಫೀ ತೆಗೆದುಕೊಂಡು ಬಂದುಬಿಡು ನಾನು ಹೇಳುವವರೆಗೂ ಕಾಯಬೇಡ."

"ಆಗಲಿ ಸಾರ್"

"ಈಗಲೇ ನೀನು ನಾಲ್ಕು ಶೇಬು, ಕಿತ್ತಳೆ ಹಣ್ಣುಗಳನ್ನು ತಂದು, ಸುಲಿದು ಇಟ್ಟುಬಿಡು"

ಜೋಶಿಗೆ ವಿಷಯವು ತಿಳಿದು ಅವನು ಹೊರಟುಹೋದನು.

ಸುಮಾರು ಅರ್ಧ ತಾಸಿನ ನಂತರ, ಕಾರಿನ ಶಬ್ದವು ಕೇಳಿಸಿತು ಅದ ರೊಡನೆ, ನಾಜೂಕಾದ ಕಾಲುಗಳ ಸಪ್ಪಳವೂ ಅವನ ಕಿವಿಗಳಲ್ಲಿ ಬಿತ್ತು ರಾಮಚಂದ್ರನು ಅವಳೊಂದಿಗೆ ಬರಬಾರದೆಂದು ಮನದಲ್ಲಿ ಒಂದು ಕ್ಷಣ ನೆನೆಸಿದ ಪ್ರಕಾಶ. ಅವನ ಪ್ರಾರ್ಥನೆಯು ನೆರವೇರಿತೆಂಬಂತೆ ದಮಯಂತಿ ಯೊಬ್ಬಳೇ ಒಳಗೆ ಬಂದಳು

"ಬಾ, ಕೂಡು" ಎಂದು ವಾತ್ಸಲ್ಯದಿಂದ ಹೇಳಿದ. ಆಗ ಅವನ ಸಂತೋಷ ಇಮ್ಮಡಿಯಾಗಿತ್ತು.

ಅವಳು ಬಹಳ ಆಯಾಸಗೊಂಡವಳಂತೆ ಕಂಡುಬಂದಳು ಕುರ್ಚಿಯ ಮೇಲೆ ಕುಳಿತು "ಉಸ್" ಎಂದು ನಿಟ್ಟುಸಿರುಬಿಟ್ಟು "ಏನು ಇನ್ನು ಹೊರಡೋಣವೇ? ಅಣ್ಣನನ್ನೂ ಅಪ್ಪನನ್ನೂ ಅಲ್ಲಿಯ ವ್ಯವಸ್ಥೆ ನೋಡಿ ಕೊಳ್ಳಲು ಹೇಳಿ ನಾನು ನಿಮ್ಮನ್ನು ಕರೆದುಕೊಂಡು ಹೋಗಲು ಬಂದೆ" ಎಂದಳು.

"ಹೋಗೋಣ. ಇಂದು ನಮ್ಮ ಜೀವನದಲ್ಲಿ ಒಂದು ಸುದಿನವ ಲ್ಲವೇ?" ಎಂದು ಅವನು ಉತ್ಸಾಹದಿಂದ ನುಡಿದನು.

"ಅದನ್ನು ನಾನೇ ಹೇಳಬೇಕೆಂದಿದ್ದೆ. ತಂದೆಯವರೊಂದಿಗೆ ಎಚ್ಚರ ದಿಂದ ವರ್ತಿಸಬೇಕು. ಮಾತುಗಳನ್ನು ತೂಗಿ ಮಾತನಾಡಬೇಕು. ತಪ್ಪಿದರೆ ಮುಗಿದೆಹೋಯಿತು."

"ನನಗೆ ತಿಳಿಯದೇ ದಮಯಂತಿ. ನಿನ್ನನ್ನು ಪಡೆಯಲು ನಾನು ಏನನ್ನು ಮಾಡಲೂ ಸಿದ್ಧನಿರುವಾಗ....... ...."

"ಇದ್ದರೂ ಜ್ಞಾಪಕವಿರಲಿ.— ಹೂಂ, ಹೊರಡಿರಿ."

"ಇದೋ" ಎದುರಿಗಿದ್ದ, ಸೇಬುಹಣ್ಣಿನ ತುಂಡನ್ನು ಕೊಟ್ಟು "ಸ್ಪೆಶಲ್ಲಾಗಿ ನಾನು ನಿನಗಾಗಿ ತಂದೆ ಒಂದು ಚೂರು ತೆಗೆದುಕೊ."

ಬಲವಂತದಿಂದ ಒಂದು ತುಂಡು ನಾಲಿಗೆಯ ತುದಿಗೆ ಇಟ್ಟುಕೊಂಡು

"ನೋ, ನೋ-ಇವರಲ್ಲಿ ಸ್ಪೇ ಶ ಲ್ ಏನೂ ತಿಳಿಯಲಿಲ್ಲವಲ್ಲಾ ಡಾಕ್ಟರ" ಎಂದಳು

ಡಾಕ್ಟರ ಪ್ರಕಾಶನಿಗೆ ಮೈಕಂಪಿಸಿತು ಆದರೆ ಮೇಲೆ ತೋರಿಸಿಕೊಳ್ಳಲಿಲ್ಲ ದಾಂಪತ್ಯ ಜೀವನದಲ್ಲಿ ಒಬ್ಬರಿಗೊಬ್ಬರು ಹೊಂದಿಕೊಂಡು ಹೋಗಬೇಕಾಗಿರುವಾಗ ಏನೇನಾಗುವುದು, ಇದೆಲ್ಲಾ ಏನು? ಎಂದು ಯೋಚಿಸಿದ ಅಷ್ಟರಲ್ಲಿ ಜೋಶಿ, ಕಾಫಿಯನ್ನು ತಂದರು

"ಸ್ವಲ್ಪ ಕಾಫಿಯಾದರೂ ಕುಡಿ "

ದಮಯಂತಿ ಮೌನವಾಗಿದ್ದಳು

ಡಾಕ್ಟರನಿಗೆ ಏನೂ ತೋಚಲಿಲ್ಲ "ದಮಯಂತಿ, ಈ ದಿನ ನಿನಗೆ ಮನದಲ್ಲಿ ಚಿಂತೆ ಅಧಿಕವಾದಂತೆ ತೋರುತ್ತದೆ ಪ್ರತಿದಿನದಂತೆ ಈ ದಿನ ನೀನು ಇಲ್ಲ" ಎಂದ

"ಹೌದು: ಇಲ್ಲ ಅದನ್ನು ಕಂಡುಹಿಡಿಯಲು ನಿಮಗೆ ಇಷ್ಟು ಹೊತ್ತು ಹಿಡಿಯಿತೇ? ಈ ದಿನ ತಂದೆಯವರೊಂದಿಗೆ ಮಾತನಾಡಿಯೇ ತೀರಬೇಕು. ಅಲ್ಲಿಯವರೆಗೂ ನನ್ನ ಮನಸ್ಸಿನಲ್ಲಿ ಶಾಂತಿಯೇ ಇಲ್ಲ."

ಡಾಕ್ಟರ ಪ್ರಕಾಶನು ಸಂತೋಷದಿಂದ ಉಬ್ಬಿಹೋದ

"ಎಲ್ಲವೂ ನಿನ್ನ ಇಷ್ಟದಂತೆ ನಡೆಯುವುದು ನೋಡು ದಮಯಂತಿ. ನಾನು ನಿನಗಾಗಿ ಏನನ್ನಾದರೂ ಮಾಡಲು ಸಿದ್ಧನಿದ್ದೇನೆ" ಎಂದು ಅವನು ಎರಡನೆಯ ಸಲ ನುಡಿದ.

ಗಡಿಯಾರವು ಏಳು ಗಂಟೆ ಎಂದು ಎಚ್ಚರಿಸಿತು. ದಮಯಂತಿ ಎದ್ದು "ನಾನಿನ್ನು ಹೊರಡಲೆಬೇಕು'' ಎಂದಳು. ಇಬ್ಬರೂ ಎದ್ದು ಹೊರಗೆ ಬರುವಾಗ ಕಂಪೌಂಡರ ಜೋಶಿಯವರು "ಯಾರಾದರೂ ಅರ್ಜೆಂಟಾಗಿ ಕರೆದರೆ ... '' ಎಂದ.

ಪ್ರಕಾಶನಿಗೆ ಆ ಸಮಯದಲ್ಲಿ ಯಾರೂ ಕರೆಯುವುದು ಬೇಡವಾಗಿತ್ತು.

ಆದರೂ ಅವನು "ಬಹಳ ಅರ್ಜೆಂಟ, ಎಂದು ಕೂಗಿದರೆ ದಿವಾನ ಬಹಾದ್ದೂರ ದೇಸಾಯರ ಮನೆಗೇ ಫೋನ್ ಮಾಡೆಂದು ಹೇಳು'' ಎಂದು ಹೇಳಿದ.

ಕಾರು ದಿವಾನ ಬಹಾದ್ದೂರರ ಮನೆಯ ಮುಂದೆ ನಿಂತಿತು. ಹೊರಗೆ ಕಾದಿದ್ದ ದರ್ವಾನನು ಬಂದು ಕಾರಿನ ಬಾಗಿಲನ್ನು ತೆರೆದು ನಿಂತ ದಮಯಂತಿಯು ಇಳಿದು ಒಳಗೆ ಹೊರಟಳು. ಪ್ರಕಾಶನು ಅವಳನ್ನು ಹಿಂಬಾಲಿಸಿದ

"ಸಾರ್, ನಿಮಗಾಗಿ ಟೆಲಿಫೋನಿನಲ್ಲಿ ಒಂದು "ಕಾಲ್" ಬಂದಿದೆ ಬಹಳ ಅವಸರವಂತೆ ಮಾತನಾಡುತ್ತೀರಾ?" ಟೆಲಿಫೋನ ಹಿಡಿದ ದೇಸಾಯರ ಕಾರ್ಯದರ್ಶಿ ಕೇಳಿದ

"ಡಾಕ್ಟರ ಮನೆಯಲ್ಲಿ ಇಲ್ಲವೆಂದು ಹೇಳಿಬಿಡು" ಎಂದಳು ದಮಯಂತಿ.

"ನಿಲ್ಲು, ಹಾಗೆ ಹೇಳಬೇಡ, ದಮಯಂತೀ. ಯಾರು ಕರೆಯುತ್ತ ಲಿದ್ದಾರೆಂದು ನೋಡಿಕೊಂಡು ಬರುತ್ತೇನೆ" ಎಂದ ಪ್ರಕಾಶ.

"ತಂದೆಯವರು ಕಾದಿದ್ದಾರೆ ದಯಮಾಡಿ" ಎಂದು ರಾಮಚಂದ್ರ ಅವಸರಪಡಿಸಿದ

"ಒಂದೇ ನಿಮಿಷದಲ್ಲಿ ನೋಡಿಕೊಂಡು ಬರುತ್ತೇನೆ" ಎಂದು ಪ್ರಕಾಶ ಟೆಲಿಫೋನ ಕೈಯಲ್ಲಿ ತೆಗೆದುಕೊಂಡ

ಟೆಲಿಫೋನಿನಲ್ಲಿ ಮಾತನಾಡುತ್ತಿದ್ದವರು ಬೇರೆ ಯಾರೂ ಇರದೆ, ಡಾಕ್ಟರ ಪ್ರಕಾಶನ ಆಪ್ತರೂ ಮತ್ತು ಹುಬ್ಬಳ್ಳಿಯ ಗಣ್ಯ ವ್ಯಕ್ತಿಗಳೂ ಆದ ದೇಶಪಾಂಡೆಯವರು. "ಡಾಕ್ಟರ, ನನ್ನ ಎರಡನೆಯ ಮಗಳು ಕಮಲೆಗೆ ಅಕಸ್ಮಾತ್ತಾಗಿ ಜ್ವರವು ಕಾಣಿಸಿಕೊಂಡು ಅಧಿಕವಾಗಿದೆ ಡಾಕ್ಟರ, ಅವಳಿಗೆ ಮಾತೇ ನಿಂತು ಹೋಗಿದೆ. ಕಣ್ಣುಗಳು ಒಂದು ತರಹವಾಗಿವೆ. ಬೇಗನೆ ಬನ್ನಿ ಡಾಕ್ಟರ, ಡಾಕ್ಟರ, ಬರುತ್ತೀರಾ? ನೀವು ಬಂದರೇ ವಿನಹ ನಾವು ಇಲ್ಲಿ ಇರಲಾರೆವು ಕೂಸು ಒದ್ದಾಡುತ್ತಿದೆ" ಎಂದು ಫೋನಿನಲ್ಲಿ ಬೇಡಿಕೊಂಡರು.

ಬೇರೆ ಡಾಕ್ಟರರ ಹೆಸರು ಹೇಳಿ ತಪ್ಪಿಸಿಕೊಳ್ಳೋಣವೆಂದರೆ ಮನಸ್ಸು ಎಡೆಗೊಡಲಿಲ್ಲ ಡಾಕ್ಟರ ಶ್ರೀನಿವಾಸ, ಡಾ. ಜೋಸೆಫ್ ಎಷ್ಟೋ ಹೆಸರು ಗಳು ಜ್ಞಾಪಕಕ್ಕೆ ಬಂದವು. ಆದರೊಂದಿಗೆ ಕಮಲೆಯ ಮುದ್ದು ಮುಖವೂ ಮುಂದೆ ಬಂತು

ದೇಶಪಾಂಡೆ ದಂಪತಿಗಳು ಪ್ರಕಾಶನಲ್ಲೇ ನಂಬಿಕೆಯಿದ್ದವರು. ಆ ಕೂಸಿಗೆ ಹಿಂದೆ ಇಂಜೆಕ್ಶನ್ನು ಮಾಡುವಾಗ ಅವಳು ಹೇಳಿದ ಮಾತುಗಳು ಪ್ರಕಾಶನಿಗೆ ಕಿವಿಯಲ್ಲಿ ಝೇಂಕರಿಸಿದವು. "ಡಾಕ್ಟರ, ಇಂಜೆಕ್ಶನ್ನಿನಿಂದ

ನೋವಾದರೂ, ತಾಳಿಕೊಳ್ಳದೆ ಹೋದರೆ ಕೊಡಿಸಿಕೊಳ್ಳುವದೇಕೆ" ಇದು ಡಾಕ್ಟರರು "ಇಂಜೆಕ್ಶನ್ನು ನೋವಾಗುವುದಿಲ್ಲವೇ" ಎಂದು ಕೇಳಿದ ಪ್ರಶ್ನೆಗೆ ಆ ಕೂಸು ಕೊಟ್ಟ ಉತ್ತರ

"ಕೂಡಲೆ ಬಂದೆ, ಇದೋ ಹೊರಡುತ್ತಿದ್ದೇನೆ" ಡಾಕ್ಟರರು ಉತ್ತರ ಕೊಟ್ಟು ರಿಸೀವರನ್ನು ಇಟ್ಟು, ಈಚೆಗೆ ಬಂದು "ದಮಯಂತಿ, ನಾನು ಒಂದು ಕೇಸ ನೋಡಲು ಈಗ ಹೊರಡಲೇ ಬೇಕು" ಎಂದ

ರಾಮಚಂದ್ರನು ಅವನನ್ನು ಕೋಪದಿಂದ ನೋಡಿದ.

"ಈಗ ನೀವು ಹೋಗಿಬಿಟ್ಟರೆ, ತಂದೆಯವರು ನಿಮ್ಮನ್ನು ಇನ್ನೊಮ್ಮೆ ನೋಡಲಾರರು ತಿಳಿಯಿತೇ?" ದಮಯಂತಿಯ ಕಣ್ಣುಗಳಲ್ಲಿ ನೀರು ತುಂಬಿತ್ತು

"ಗೊತ್ತು ಆದರೆ ಅದಕ್ಕಾಗಿ ಪ್ರಾಣಕ್ಕೇ ಬಂದ ಒಂದು ಜೀವವನ್ನು ಕೈಬಿಡುವುದೇ? ಆ ಕೂಸು ನನ್ನನ್ನೇ ನಂಬಿದೆ."

"ಅಲ್ಲಿಗೆ ಹೋಗುವುದಾದರೆ ನನ್ನನ್ನು ಸಂಪೂರ್ಣ ತಿರಸ್ಕರಿಸಿದಂತಾಗುವುದು ಯೋಚಿಸಿ ನೋಡಿರಿ"

"ಯೋಚಿಸಿದ್ದೇನೆ ದಮಯಂತೀ, ಅಲ್ಲಿಗೆ ಹೋಗುವುದು ನನ್ನ ಕರ್ತವ್ಯ."

"ಹಾಗೆ ನೀವು ತಿಳಿದಿದ್ದರೆ ಹೋಗಿ. ಚನ್ನಾಗಿದೆ. ನೀವೊಬ್ಬರೇ ಡಾಕ್ಟರರೇನು ಅವರಿಗೆ. ಎಷ್ಟೋ ಮಂದಿ ಇಲ್ಲವೇ?"

"ಇರಬಹುದು ಆದರೆ ಉದ್ಯೋಗಧರ್ಮನಿರ್ವಹಣೆಯ ನಂತರ ಮಿಕ್ಕಕಡೆ ಲಕ್ಷ್ಯ ಕೊಡಬೇಕೆಂಬುದೇ ನನ್ನ ಮತ"

ದಮಯಂತಿಯ ಮೋರೆ ಸಣ್ಣದಾಯಿತು.

"ನಾನು ಬರುತ್ತೇನೆ ದಮಯಂತಿ"

"ಹೋಗುತ್ತೇನೆ–ಎಂದು ಹೇಳಿ," ಸಿಡುಕಿನಿಂದ ದಮಯಂತಿಯೆಂದಳು.

"ನಿನ್ನ ಇಷ್ಟ"

ಪ್ರಕಾಶನು ಹೊರಹೊರಟ ಸುಂದರ ಯುವತಿ, ಧನ, ಆಸ್ತಿ, ಎಲ್ಲವನ್ನೂ ತ್ಯಜಿಸಿ, ಅವನಿಗಾಗಿ ಕಾದಿದ್ದ ಒಂದು ಸಣ್ಣ ಕೂಸನ್ನು ನೋಡಲು ಹೊರಟ. ಇವುಗಳೆಲ್ಲವೂ ಬೇಕಾದರೆ ತಾನೆಷ್ಟು ಕಷ್ಟ ಪಡಬೇಕು ಕಷ್ಟಪಟ್ಟರೂ, ಸಿಗುವವೋ? ಇಲ್ಲವೋ? ಯಾರು ಕಂಡವರು? ಆದರೂ ಡಾಕ್ಟರ ಪ್ರಕಾಶ ರೋಗಿಯ ಮನೆಯ ಕಡೆ ಹೊರಟ.

ದಮಯಂತಿಯ ಮುಖದ ಮೇಲೆ ಅಲಕ್ಷ್ಯ ಭಾವವು ಒಡಮೂಡಿತ್ತು. ಆದರೆ "ಡಾಕ್ಟರ ಪ್ರಕಾಶನು ನಿಜವಾಗಿಯೂ ದೊಡ್ಡ ಮನುಷ್ಯ, ಗಣ್ಯವಕ್ತಿ" ಎಂದು ಅವಳ ಅಂತರಾತ್ಮ ಸಾರುತ್ತಿತ್ತು

ಅಣ್ಣನೂ ತಂಗಿಯೂ ಒಳಗೆ ಹೋಗಲು ಹಿಂತಿರುಗಿದರು ಇದನ್ನೆಲ್ಲ ಒಳಗಿನಿಂದ ಕೇಳುತ್ತಲಿದ್ದ ತಂದೆಯವರು ಹೊರಗೆ ಬಂದು ಎಲ್ಲವನ್ನೂ ನೋಡಿ "ದಮಯಂತೀ, ನೀನು ನಿಜವಾಗಿಯೂ ಭಾಗ್ಯಶಾಲಿ ಇಂತಹ ಜೀವನ ಸಂಗಾತಿಯು ದೊರೆಯ ಬೇಕಾದರೆ ಎಷ್ಟು ಕಷ್ಟ ಪಡಬೇಕಾಗಿತ್ತು ಗೊತ್ತೇ? ಅವನು ನಿಜವಾಗಿಯೂ ಕರ್ತವ್ಯಪರ ನೀನು ಅದೃಷ್ಟವಂತೆ. ಎಲ್ಲಿ? ದೇಶಪಾಂಡೆಯವರ ಮನೆಗೆ ಫೋನ್ ಮಾಡಿ ಪ್ರಕಾಶನನ್ನು ಕರೆ" ಎಂದರು. ಅವರ ಕಣ್ಣುಗಳಲ್ಲಿ ನೀರು ಹರಿಯುತ್ತಿತ್ತು

ಪ್ರಕಾಶ ದಮಯಂತಿಯರ ವಿವಾಹವು ಅತಿ ವಿಜೃಂಭಣೆಯಿಂದ ಆಯಿತೆಂದು ಬೇರೆ ಹೇಳಬೇಕಾಗಿಲ್ಲ.

---

# ಕೆಂಪು ಬಳೆಗಳು

"ಜಯ ಮಂಗಳಂ, ನಿತ್ಯ ಶುಭ ಮಂಗಳಂ" ಎಂದು ಹಾಡುತ್ತ ನಗು ಮೊಗದಿಂದ ಜಾನಕಿ ತನ್ನ ತಮ್ಮನ ಕೋಣೆಯೊಳಕ್ಕೆ ಬಂದಳು.

ಆಗ ಶ್ರೀಪತಿ ವಸಂತಳ ಕೈಗೆ ಕೆಂಪುಬಳೆಗಳನ್ನು ಹಾಕುತ್ತಿದ್ದ ಕೈಯನ್ನು ಅವನು ಒತ್ತಿದ ಹಾಗೆಲ್ಲ ಆಗುವ ವ್ಯಥೆ ವಸಂತಳ ಮುಖದಲ್ಲಿ ಚೆನ್ನಾಗಿ ಪ್ರತಿಬಿಂಬಿಸುತ್ತಿತ್ತು "ಸಾಕು ಬಿಡಿ, ನಿಮ್ಮ ಅಕ್ಕ ಬರುತ್ತ ಲಿದ್ದಾರೆ" ಎಂದು ಕೈ ಕೊಸರಿಕೊಂಡಳು

"ಇರು ವಸಂತ, ಇನ್ನು ಸ್ವಲ್ಪ ಹೊತ್ತು ಇದ್ದರೆ ಈ ಎಂಟು ಬಳೆಗ ಳನ್ನೂ ಹಾಕಿಬಿಡುತ್ತೇನೆ ಆ ಮೇಲೆ ಗಿಲ್‌ಗಿಲ್ ಎನ್ನುತ್ತ ಓಡಾ ಡುತ್ತಲಿರಬಹುದು." ಎಂದು, ಆನಂದ, ಹಾಸ್ಯಲಹರಿಯಲ್ಲಿ ಕೈ ಬಿಡದೇ ಅಕ್ಕನ ಕಡೆ ನೋಡಿದ.

"ಹೌದು, ವಸಂತ, ಇನ್ನು ನಾಲ್ಕೇ ಬಳೆಗಳಿವೆ ಅವನು ಹೇಳುವಂತೆ ಸ್ವಲ್ಪ ಸಹಿಸಿಕೋ. ಇನ್ನು ಒಂದು ತಿಂಗಳಲ್ಲಿ 'ಬಳೆ' ಇಡಿಸಿಕೊಳ್ಳು ವಾಗ?"... .. ಎಂದು ಪೂರ್ತಿಮಾಡದೆ ತನ್ನ ಕೈಯಲ್ಲಿದ್ದ ಮಲ್ಲಿಗೆ ದಂಡೆ ಯನ್ನು ಅವಳ ತಲೆಯಲ್ಲಿಟ್ಟು, ಅವಳ ಬಳಿ ಕುಳಿತಳು ಜಾನಕಿ ನಾಚಿಕೆ ಯಿಂದ ಮುಖವು ಕೆಂಪೇರಲು, ವಸಂತಳು ತಲೆ ಬಾಗಿ ಹೊರಹೊರಟಳು.

ವಸಂತ, ಹಾಕಿಕೊಂಡ ಬಳೆಗಳು ಶಬ್ದ ಮಾಡುತ್ತಿರಲು ಹೊರಗೆ ಬಂದಳು. ಆ ನಾದವು ಶ್ರೀಪತಿಯ ಮನದ ತೆರೆಯಲ್ಲಿಯ ಕೆಲವು ಸಂಗತಿ ಗಳನ್ನು ಅವನ ಕಣ್ಣು ಮುಂದೆ ತಂದಿತು. ಅಹುದು, ಅವು ಐದು ವರುಷ ಗಳ ಹಿಂದೆ ನಡೆದ ಸಂಗತಿಗಳು.

ಇಂದು ಒಂದು ಹೆಸರಾದ ಕಂಪನಿಯ ಮ್ಯಾನೇಜರನಾಗಿ, ವಿಶಾಲ ವಾದ ಬಂಗಲೆಯಲ್ಲಿ ಸುಖಜೀವನ ನಡೆಸುತ್ತಲಿರುವ ಶ್ರೀಪತಿಯು ಅಂದು ಅದೇ ಕಂಪನಿಯ ಸಾಮಾನ್ಯ ಕಾರಕೂನನಾಗಿದ್ದ. ಆಗ ಅವನ ಜೀವನ ಸಾಥಿಯಾಗಿ, ಕಲ್ಯಾಣಿಯು ಬಂದಿದ್ದಳು. ಔಷಧದ ಅಂಗಡಿಯ ಯಜ ಮಾನರ ಒಬ್ಬಳೇ ಮಗಳಾದ ಕಲ್ಯಾಣಿ, ಕಂಡ ಪದಾರ್ಥಗಳಲ್ಲಿ ಕಣ್ಣಿಡುವ ಸ್ವಭಾವ ಉಳ್ಳವಳಾಗಿದ್ದಳು. ತವರುಮನೆಯವರು ಅವಳು ಬಯಸಿದು

ದನ್ನು ತಂದುಕೊಡುವ ಸ್ಥಿತಿಯಲ್ಲಿಯೂ ಇದ್ದರು ಆದರೆ ಗಂಡನೊಂದಿಗೆ ಬಾಳುವೆ ನಡೆಸಲನುವಾಗಿ ಶ್ರೀಪತಿಯೊಡನಿರುವಾಗ ಅದು ನಡೆಯಲಿಲ್ಲ ಅವನ ತಿಂಗಳು ದುಡಿತದ ಸಂಬಳ ಮನೆಯ ಖರ್ಚುಗಳಿಗೇ ಆಗುತ್ತಿರಲಿಲ್ಲ ಎಂದ ಮೇಲೆ ಕಲ್ಯಾಣಿಯ ಇತರ ಕೋರಿಕೆಗಳನ್ನು ಹೇಗೆ ತಾನೇ ತೀರಿಸಬಲ್ಲ?

ತಾನು ಸೇರಿದ ಮನೆಯಲ್ಲಿ ದರಿದ್ರದೇವತೆ ತಾಂಡವವಾಡುತ್ತಿರಲು ಕಲ್ಯಾಣಿಯು ತವರುಮನೆಯ ಸೌಭಾಗ್ಯಲಕ್ಷ್ಮಿಯ ಸುಖವನ್ನು ಸುರಿಯಲಾರಂಭಿಸಿದಳು. ದುಡ್ಡಿನ ಮದದಿಂದ ಕೊಬ್ಬಿದ ಕಲ್ಯಾಣಿಯ ತಂದೆ ತನ್ನ ಹೆಚ್ಚಳವನ್ನು ಶ್ರೀಪತಿಗೆ ತೋರಿಸಲು, ಆಗಾಗ್ಗೆ ತನ್ನ ಕಾರಿನಲ್ಲಿ ಶ್ರೀಪತಿಯ ಮನೆಗೆ ಬಂದು, ಕಲ್ಯಾಣಿಯನ್ನು ಕರೆದುಕೊಂಡು ಹೋಗಿ ವಾರ ವಾರಗಳ ವರೆಗೆ ತನ್ನ ಮನೆಯಲ್ಲಿ ಇಟ್ಟುಕೊಳ್ಳುತ್ತಿದ್ದನು ಮೆಲ್ಲಮೆಲ್ಲನೆ ಕಲ್ಯಾಣಿಯ ಮೈಮೇಲೆ, ಚಿನ್ನ, ವಜ್ರ, ವೈಢೂರ್ಯಗಳು ಮಿನುಗಲಾರಂಭಿಸಿದವು. ಜರತಾರಿ ಸೀರೆಯು ಯಾವಾಗಲೂ ಮೈಮೇಲೆ ತಾಂಡವವಾಡಲಾರಂಭಿಸಿತು ಕಲ್ಯಾಣಿ ಯಾವಾಗಲೂ ತನ್ನ ಆಭರಣ, ಸೀರೆ ಮೊದಲಾದವುಗಳ ಬಗ್ಗೆ ಮಾತ್ರ ಮಾತನಾಡುತ್ತಿದ್ದಳು. ತವರುಮನೆಯ ಧನವನ್ನು ಹೊಗಳಿದಳು. ತಂದೆಯ ಕೀರ್ತಿ ಪ್ರತಿಷ್ಠೆಗಳ ಬಗ್ಗೆ ಗಂಟೆ ಗಂಟೆಗಳ ಕಾಲ ಉಪನ್ಯಸಿಸಿದಳು ಕೊಂಚ ಕಾಲದ ನಂತರ ಅವಳ ಖರ್ಚಿಗೆಂದು ಅವಳ ತಂದೆತಾಯಿಯರು ಹಣವನ್ನೂ ಕೊಡಲಾರಂಭಿಸಿದರು.

ಶ್ರೀಪತಿಗೆ ಇದರಿಂದ ಮನೋವೇದನೆ ಹೆಚ್ಚಾಯಿತು. ಇದೆಲ್ಲವೂ ತನ್ನ ದೀನಸ್ಥಿತಿಯನ್ನು ಎತ್ತಿ ತೋರಿಸಲೋಸುಗವೇ ಎಂದು ತಿಳಿದ, ಮೇಲಾಗಿ ಇವನು ಈಗಲೇ ನಮ್ಮ ಹುಡುಗಿಯನ್ನು ಅಳಿಸುತ್ತಿದ್ದರೆ, ಇನ್ನು ಮುಂದೆ ಇವನಿಂದ ನಮ್ಮ ಹುಡುಗಿ ಎಷ್ಟು ಸುಖಪಡುವಳೋ? ಎಂದು ಅವನ ಅತ್ತೆಯ ಮನೆಯವರು ಆಗಾಗ್ಗೆ ಆಡುತ್ತಿದ್ದ ಮಾತುಗಳು ಅವನ ಮನಸ್ಸನ್ನು ಹೆಚ್ಚಾಗಿ ನೋಯಿಸಿದವು.

ಒಂದು ದಿನ ಆಫೀಸಿನಿಂದ ತಿರುಗಿಬಂದ ಶ್ರೀಪತಿಯನ್ನು ಸಂತೋಷದ ಮುಖಾರವಿಂದದಿಂದ ಎದುರುಗೊಂಡಳು ಕಲ್ಯಾಣಿ ಅವಳ ಸಂತೋಷವನ್ನು ಕಂಡ ಶ್ರೀಪತಿಗೆ ಆದಿನ ಏನೋ ವಿಶೇಷ ಇರಲೇಬೇಕೆಂದು ತಿಳಿಯಿತು ಕಾಫೀಯ ಲೋಟವನ್ನು ಕೈಯಲ್ಲಿ ಹಿಡಿದುಕೊಂಡು ಅವಳಕಡೆ ನೋಡಿದ. ಅವಳು ಕೈಗಳನ್ನು ಮುಂದಕ್ಕೆ ಚಾಚಿ—"ನೋಡಿದಿರಾ, ನಾನು ಈ ದಿನ

ಹೊಸದಾಗಿ ಎಂಟು ಪಿಂಗಾಣಿ ಬಳೆಗಳನ್ನು ಹಾಕಿಸಿಕೊಂಡಿದ್ದೇನೆ'' ಎಂದು ಹೇಳಿದಳು

ತಟ್ಟನೆ ಶ್ರೀಪತಿಗೆ ಆಶ್ಚರ್ಯವಾಯಿತು "ಅದಿರಲಿ, ಯಾರು ಹಾಕಿದರು ?" ಎಂದು ಕೇಳಿದ.

"ಏಕೆ, ಬಳೆಗಾರನೇ ಹಾಕಿದ'' ಎಂದು ಅವಳು ಬಹಳ ಸುನಾಯಾಸವಾಗಿ ನಗುತ್ತ ಉತ್ತರಕೊಟ್ಟಳು.

"ಇಷ್ಟು ಚಿನ್ನದ ಬಳೆಗಳಿರುವಾಗ ಎರಡು ನೂರು ರೂಪಾಯಿ ಹಾಳು ಮಾಡಿ ಈ ಪಿಂಗಾಣಿ ಬಳೆಗಳನ್ನು ಹಾಕಿಸಿಕೊಳ್ಳುವದೇತಕ್ಕೊ ?'' ಎಂದು ಕೋಪದ ಭರದಲ್ಲಿ ಶ್ರೀಪತಿ ನುಡಿದ.

"ನಾನು ಮಾತ್ರ ಹಾಕಿಸಿಕೊಳ್ಳಲಿಲ್ಲ. ಐದಾರು ಜನರು ಹಾಕಿಸಿಕೊಂಡೆವು ಮೇಲಾಗಿ ಮಗ್ಗಲು ಮನೆಯ ಅಜ್ಜಿ ಎಲ್ಲರಿಗೂ ಆರಿಸಿ ಹಾಕಿಸಿದಳು. ನಿನ್ನ ಕೆಂಪು ಮೈಗೆ ನಾಲ್ಕು ಕೆಂಪು ಬಳೆಗಳನ್ನು ಹಾಕಿದರೆ ಎಷ್ಟು ಚೆನ್ನಾಗಿ ಇರುತ್ತದೆ ಎಂದು ಹಾಕಿಸಿದಳು; ಆದರಲ್ಲಿ ತಪ್ಪೇನು ? ಇಷ್ಟಕ್ಕೂ ನನ್ನ ಹಣ ಕೊಟ್ಟು ನಾನು ಬಳೆ ಇಡಿಸಿಕೊಂಡಿದ್ದೇನೆ" ಎಂದು ಅವನ ಪ್ರಶ್ನೆಗೆ ಮಾರುನುಡಿದಳು ಕಲ್ಯಾಣಿ.

"ಕಲ್ಯಾಣಿ, ಯಾರೊಡನೆ ಮಾತನಾಡುತ್ತಿರುವಿ ಎಂಬುದು ಜ್ಞಾಪಕವಿರಲಿ,ನನ್ನ ಸ್ವಭಾವ ನಿನಗಿನ್ನೂ ತಿಳಿದಿಲ್ಲ ನಾನೂ ಎಂದಾದರೂ ನನ್ನ ಹಣ, ನಿನ್ನ ಹಣ ಎಂದು ಮಾತನಾಡಿದ್ದುಂಟೇ ? ಹಣದ ಕೊರತೆಯಿಂದಲ್ಲವೇ ನಾನು ನಿನ್ನಾಸೆಗಳನ್ನು ಪೂರೈಸಲಾರದವನಾಗಿದ್ದೇನೆ. ಇನ್ನಾದರೂ ಆಲೋಚಿಸಿ ಮಾತನಾಡು" ಎಂದು ಹೇಳಿ ಮುಗಿಸುವಮುನ್ನವೇ ಒಳಗೆ ಕಲ್ಯಾಣಿಯು ಅಳುವ ಶಬ್ದವು ಕೇಳಿಬಂತು. ತಕ್ಷಣ ಓಡಿಹೋದ ಶ್ರೀಪತಿ ಕಲ್ಯಾಣಿಯನ್ನು ನೋಡಿ "ಕಲ್ಯಾಣೀ, ನಾನು ನಿನ್ನನ್ನು ಇವನ್ನೆಲ್ಲವನ್ನೂ ಒಡೆ ಎಂದು ಹೇಳಿದೆನೇ? ಕೈಯಲ್ಲಿ ಕಾಜು ನೇರಿದರೆ ಕಷ್ಟ. ಸುಮ್ಮನಿರು" ಎಂದು ಹೇಳುತ್ತ ಅವಳ ಕೈಗಳನ್ನು ಹಿಡಿದುಕೊಂಡನು. ಆದರೆ ಕಾರ್ಯವು ಮಿಂಚಿಹೋಗಿತ್ತು. ಕಲ್ಯಾಣಿಯು ಅಲ್ಲಿಯೇ ಇದ್ದ ಮಂಚದ ಕೊನೆಗೆ ಆ ಕೈಗಳನ್ನು ಹೊಡೆದುಕೊಂಡಿದ್ದಳು. ಅದರಿಂದ ಅವಳ ಕೈಯಲ್ಲಿ ಗಾಯವಾಗಿತ್ತು. ಬಳೆಗಳೆಲ್ಲವೂ ಚೂರು ಚೂರಾಗಿ ಕೆಳಗೆ ಸಿಡಿದು ಬಿದ್ದಿದ್ದವು. ಅಷ್ಟರಲ್ಲಿಯೇ ಅಲ್ಲಿಗೆ ಬಂದ ಅವನ ಅತ್ತೆ–ಮಾವಂದಿರು ಅವನ ತಲೆಯನ್ನು ಇನ್ನಷ್ಟು ಕೆಡಿಸಿದರು.

"ಕಲ್ಯಾಣಿ, ನಿನಗೆ ಬಳೆ ಇಡಿಸುವಾಗ ಏನೇನು ಬೇಕೆಂದು ಕೇಳಿಕೊಂಡು ಹೋಗೋಣವೆಂದು ನಾವು ಬಂದರೆ ಇದು ಏನು ಅಪಶಕುನ, ಅಳುತ್ತ ಕೂತಿದ್ದೀಯಲ್ಲಾ" ಎಂದು ಒದರಿದಳು ಅವಳ ತಾಯಿ. ಇದೇ ಸಮಯವೆಂದು ಶ್ರೀಪತಿ ಅಲ್ಲಿಂದ ಮೆಲ್ಲನೆ ಜಾರಿದ.

ರಾತ್ರಿ ಎಂಟು ಗಂಟೆ ಇರಬಹುದು ಮನೆಗೆ ತಿರುಗಿದ ಶ್ರೀಪತಿಗೆ ಆಶ್ಚರ್ಯ ಕಾದಿತ್ತು ಮನೆಗೆ ಕೀಲಿ ಹಾಕಿತ್ತು; ಕೀಲಿ ಕೈ ಮಗ್ಗಲು ಮನೆಯಲ್ಲಿ ಕೊಟ್ಟುಬಿಟ್ಟು ಹೊರಟುಹೋಗಿದ್ದಳು, ಕಲ್ಯಾಣಿ.

ಶ್ರೀಪತಿಯೂ ಅವಳು ಹೋದುದರ ಬಗ್ಗೆ ಹೆಚ್ಚು ಚಿಂತಿಸಲಿಲ್ಲ. ಅವನಿಗದು ಸಹಜವಾಗಿತ್ತು

ಎರಡು ತಿಂಗಳು ಹೇಗೋ ಕಳೆದುಹೋದವು ಆದಿನ ಟಪಾಲಿನಲ್ಲಿ ಮಾವನವರಿಂದ ಬಂದ ಪತ್ರ ಓದಿದ ಶ್ರೀಪತಿಯ ಎದೆ ಒಡೆದುಹೋಗುವಂತಾಯ್ತು

"ಕಲ್ಯಾಣಿಗೆ ಗರ್ಭಪಾತವಾಗಿ ಅಪಾಯಸ್ಥಿತಿಯಲ್ಲಿದ್ದಾಳೆ, ನಿನ್ನನ್ನು ನೋಡಲು ಹಾತೊರೆಯುತ್ತಿರುವಳು. ಕೂಡಲೇ ಹೊರಟು ಬಾ"

ನಿನ್ನ ಮಾವ.

ಶ್ರೀಪತಿ ಆಫೀಸಿಗೆ ನಾಲ್ಕು ದಿನ ರಜೆಗೆ ಬರೆದು ಕಲ್ಯಾಣಿಯನ್ನು ನೋಡಲು ಹೊರಟ.

ಮಂಚದ ಮೇಲೆ ಒಣಗಿದ ಬಳ್ಳಿಯಂತೆ ಮಲಗಿದ ಕಲ್ಯಾಣಿಯನ್ನೂ ಆ ಕೋಣೆಯಲ್ಲಿ ಆವರಿಸಿದ್ದ ನಿಶ್ಶಬ್ದತೆಯನ್ನೂ ಕಂಡು ಶ್ರೀಪತಿ ಭಯದಿಂದ ನಡುಗಿದ. ಮೆಲ್ಲನೆ ಕಣ್ಣನ್ನು ತೆಗೆದ ಕಲ್ಯಾಣಿ ಗಂಡನನ್ನು ನೋಡಿ "ನೀವೇತಕ್ಕೆ ಭಯಪಡುವಿರಿ? ಆದಿನ ಇಲ್ಲದ ಡಂಭಾಚಾರದಿಂದ, ಹೆಮ್ಮೆಯಿಂದ, ನಾನು ತವರು ಮನೆಗೆ ಬಂದುದಕ್ಕೆ ಸರಿಯಾದ ಶಾಸ್ತಿ ನನಗೆ ಆಗಿದೆ. ನೀವು ನನ್ನನ್ನು ಕ್ಷಮಿಸಿ. 'ಕರುಳು ನಾಚಿಕೆಯಿಲ್ಲದ್ದು' ಎಂಬ ನಾಣ್ನುಡಿಯು ನಿಜ ಅದನ್ನು ತಿಳಿಸಲೇನೋ ಎಂಬಂತೆ ನನ್ನ ಪ್ರಾಣವು ಇನ್ನೂ ನಿಂತಿದೆ"

"ಹೆಣ್ಣು ಎಂಬ ಒಂದು ಜಾತಿಯನ್ನು ಸೃಷ್ಟಿಸುವಾಗ ದೇವರು ಪ್ರೀತಿ, ಕರುಳು, ಮಮತೆಗಳನ್ನೂ ಅದರ ಜೊತೆಗೆ 'ಆಶೆ'ಯನ್ನೂ ಸೇರಿಸಿಬಿಟ್ಟನು. ಅಹುದು, ಬೆಲೆ ಇಲ್ಲದ, ಇನ್ನೂ ಕೊಂಚ ಹೊತ್ತಿನಲ್ಲಿ ನಿಷ್ಪ್ರಯೋಜಕವಾದ, ಈ ಅಲಂಕಾರ ಕೂಡಿಕೊಂಡರೂ ಉಪಯೋಗವಿಲ್ಲದ, ದೇಹದ ಮೇಲಿನ ಅಲಂಕಾರಕ್ಕೆ ಹೆಣ್ಣಿಗೆ ಆಶೆ, ಹುಟ್ಟುವಾಗಲೇ ಉದಯಿಸುತ್ತದೆ.

ಅದನ್ನು, ನೀವೇಕೆ ಯಾರಾದರೂ ಸರಿ, ಬದಲಾಯಿಸಲು ಪ್ರಯತ್ನಿಸಿದರೆ–ನಿರಾಶೆ ಹೊಂದಬೇಕಾದುದೇ ಒಂದು ವೇಳೆ ಅನ್ನವಿಲ್ಲದೇ ಇದ್ದರೂ ಅಲಂಕಾರ ಮಾಡಿಕೊಳ್ಳುವದು ಹೆಣ್ಣಿನ ನೈಜ ಗುಣ ನಾನು ನಿಮ್ಮೊಂದಿಗೆ ನಡೆದುಕೊಂಡ ರೀತಿ ತಪ್ಪಾದುದೇ ಆದರೂ ಆ ವಿಷಯದಲ್ಲಿ ಪುರುಷರು ಹೆಣ್ಣನ್ನು ದಂಡಿಸುವಾಗ ಕೊಂಚ ಯೋಚಿಸಬೇಕು, ಎಂದು ನನ್ನ ಅಭಿಪ್ರಾಯ" ಎಂದು ಹೇಳಿ ಕಲ್ಯಾಣಿ ಅವನ ಕೈಗಳನ್ನು ತನ್ನ ಕಣ್ಣುಗಳಿಗೆ ಒತ್ತಿಕೊಂಡಳು ಅವಳಿಂದ ಮುಂದೆ ಮಾತನಾಡಲಾಗಲಿಲ್ಲ

"ಕಲ್ಯಾಣಿ, ನಾನು ನಿನ್ನ ಮನಸ್ಸು ನೋವಾಗುವಂತೆ ಮಾಡಿದ ಪಾಪಿ ನನ್ನನ್ನು ಕ್ಷಮಿಸು." ಎಂದು ಕಣ್ಣೀರು ತುಂಬಿದ ಕಣ್ಣುಗಳಿಂದ ಬೇಡಿಕೊಂಡ ಅವಳ ಕೈ ಸಡಿಲಾಯಿತು ಕೆಳಗೆ ಬಿದ್ದ ಕೈಯೊಂದಿಗೆ ಅವಳ ಪ್ರಾಣ ಪಕ್ಷಿಯೂ ಹಾರಿ ಹೋಯಿತು

× × × × × × × ×

ಇಂದಿಗೆ ಶ್ರೀಪತಿ ವಸಂತಳನ್ನು ಮದುವೆಯಾಗಿ ಮೂರು ವರ್ಷಗಳಾಗಿವೆ. ಅಂದು ಮುಂಜಾನೆ ಅವರೀರ್ವರೂ ಪ್ರದರ್ಶನದಲ್ಲಿ ಎಲ್ಲವನ್ನೂ ಒಂದೊಂದಾಗಿ, ನೋಡುತ್ತ ಹೊರಟರು ಕೊಂಚ ಹೊತ್ತಿನಲ್ಲಿಯೇ ಪಕ್ಕದಲ್ಲಿ ವಸಂತಳು ಇಲ್ಲದಿದ್ದುದನ್ನು ಕಂಡ ಶ್ರೀಪತಿ, ಅವಳನ್ನು ಬಳೆಗಳ ಅಂಗಡಿಯಲ್ಲಿ ಇದ್ದುದನ್ನು ನೋಡಿದಾಗ ಅವನಿಗೆ ಕಲ್ಯಾಣಿಯ ಕೊನೆಯ ಮಾತುಗಳು ಜ್ಞಾಪಕಕ್ಕೆ ಬಂದವು ತಕ್ಷಣ ಅವನು ಅವಳು ಬೇಕೆಂದು ಕೇಳಿದಷ್ಟು ಕೆಂಪು ಪಿಂಗಾಣಿ ಬಳೆಗಳನ್ನು ಕೊಂಡು ಕೊಟ್ಟನು

ಮನೆಗೆ ಬಂದ ನಂತರ "ನಿಮಗೆ ಪಿಂಗಾಣಿ ಬಳೆ ಎಂದರೆ ಕೋಪವಂತೆ ಈಗ ಏತಕ್ಕೆ ತೆಗೆದುಕೊಂಡಿರಿ? ಎಂದು ವಸಂತಳು ಕೇಳಿದಳು

"ಸರಿ ಅದನ್ನೆಲ್ಲ ಅಕ್ಕ ನಿನ್ನ ಮುಂದೂ ಹೇಳಿದಳೇ ? ಅವಳಿಗೆ ಬೇರೆ ಕೆಲಸವೇ ಇಲ್ಲ ಈಗ ಆ ಬಳೆಗಳೆಂದರೆ ನನಗೆ ಬಹಳ ಇಷ್ಟ ಅದಕ್ಕೆಂದೇ ಈ ಬಳೆಗಳನ್ನು ನಿನ್ನ ಕೈಯಲ್ಲಿ ನಾನೇ ಹಾಕುತ್ತೇನೆ" ಎಂದು ಹೇಳಿದ ಶ್ರೀಪತಿ.

ತಮ್ಮನ ಈ ಬದಲಾವಣೆಯಿಂದ ಸಂತೋಷಗೊಂಡ ಅಕ್ಕ ಜಾನಕಿ–ಮನೆ ಮಂಗಳಕರವಾಗಿರಲು "ಜಯ ಮಂಗಳಂ" ಎಂದು ಹಾಡಿದುದು ಸಮಂಜಸವೇ ಸರಿ.

# ಕಲ್ಪನಾ ವಿಲಾಸ



ಆರು ವರುಷಗಳ ನಂತರ ಅಂದು, ಆ ಬೀದಿಯಲ್ಲಿ ಹೊರಟಿದ್ದೆ. ಹಳೆಯ ಜ್ಞಾಪಕಗಳು ನನ್ನ ತಲೆಯಲ್ಲಿ ಹಾದು ಹೋದವು. ನಾನು ಹುಟ್ಟಿ ದಾರಾಭ್ಯ ಹದಿನೈದು ವರುಷಗಳವರೆಗೆ ಆ ಬೀದಿಯಲ್ಲಿಯೇ ಕಳೆದಿದ್ದೆ, ಅದೇ ಬೀದಿಯಲ್ಲಿಂದ ಶಾಲೆಗೆ ಹೋಗಿದ್ದೆ. ಆ ಬೀದಿಯಲ್ಲಿಯ, ತಗ್ಗಾದ ಮನೆಯಲ್ಲಿ ನಾನು ಬೆಳೆದೆ. ಅಂಬೆಗಾಲಿಟ್ಟು ಆಡಿದೆ. ದೊಡ್ಡವನಾದೆ. ಮಾತು ಕಲಿತೆ. ಅದೇ ಮನೆಯ ಅಂಗಳದಲ್ಲಿ ನಾನು ಚೆಂಡು ಮುಂತಾದ ಆಟಗಳನ್ನಾಡಿದೆ. ಆ ಬೀದಿಯ ಮನೆಯಲ್ಲಿದ್ದಾಗ ಅನುಭವಿಸಿದ ಸುಖ ದುಃಖಗಳು ನನ್ನ ಕಣ್ಣು ಮುಂದೆ ಬಂದು ನಿಂತವು.

ಆ ಮನೆಯ ಸಮೀಪಕ್ಕೆ ಬಂದಂತೆಲ್ಲ ಒಂದು ವಿಧವಾದ ಭಯವು ನನ್ನ ನ್ನಾವರಿಸಿತು. ಅದು ನನ್ನ ಮನೆಯೆಂದು ಹೇಳಲು ನನಗೆ ಏನು ಅಧಿಕಾರ ವಿದೆ ? ನಾವು ಈ ಊರನ್ನು ಬಿಟ್ಟು ಹೋಗುವಾಗ ಅದನ್ನು ಮಾರಿಬಿಟ್ಟೆವು ಈಗ ಅದು ನನ್ನದೆಂದು ಹೇಗೆ ಹೇಳಬಲ್ಲೆ ?

ಆಗ ನಾನು ಮ್ಯಾಟ್ರಿಕ್ ಓದುತ್ತಿದ್ದೆ. ಆಕಸ್ಮಿಕವಾಗಿ ನನ್ನ ತಂದೆ ಯವರಿಗೆ ಹೊಟ್ಟೆಯಲ್ಲಿ ನೋವು ಕಾಣಿಸಿಕೊಂಡಿತು. ಎಷ್ಟು ಔಷದೋಪ ಚಾರಗಳನ್ನು ಮಾಡಿದರೂ, ಅದು ಕಡಿಮೆಯಾಗದೇ ಹೋಯಿತು. ನಮ್ಮ ತಾಯಿಯವರೂ, ನಾವೂ ಪಟ್ಟ ವೇದನೆಯನ್ನು ವರ್ಣಿಸಲಸಾಧ್ಯ. ನಾವಿನ್ನೂ ಸಣ್ಣ ಮಕ್ಕಳು. ಏನು ಮಾಡುವುದೆಂಬುದು ತಿಳಿಯಲಿಲ್ಲ. ಹೀಗೆ ಚಿಂತಿಸುತ್ತಿರಲು ನಮ್ಮ ಸೋದರಮಾವನವರು ಮದರಾಸಿನಿಂದ ಬಂದರು. ಅವರು ಮದ್ರಾಸಿನ ರೈಲ್ವೆದಲ್ಲಿ ಒಂದು ದೊಡ್ಡ ಹುದ್ದೆಯಲ್ಲಿದ್ದರು.

ಅವರು ನಮ್ಮ ತಾಯಿಯವರನ್ನು ಕಂಡು ಈ ಸ್ಥಿತಿಯಲ್ಲಿ ಮನೆಯ ಹಿರಿಯರೊಬ್ಬರ ಸಹಾಯವಿಲ್ಲದೇ ನೀವಿಲ್ಲಿರುವುದು ಸರಿಯಾಗಿ ಕಾಣುವ ದಿಲ್ಲ. ಮೇಲಾಗಿ ಗಂಡುಸೆಂಬವನೊಬ್ಬನು ಬೇಕೇಬೇಕು. ಈ ಮನೆಯನ್ನು ಮಾರಿ, ಕೈಯಲ್ಲಿರುವ ಸಾಮಾನುಗಳನ್ನೂ ತೆಗೆದುಕೊಂಡು ನನ್ನೊಡನೆ ಮದರಾಸಿಗೆ ಬಂದು ಬಿಡು. ನಿನ್ನ ಗಂಡನಿಗೆ ಬೇಕಾದ ವೈದ್ಯ ಚಿಕಿತ್ಸೆಯನ್ನು ಅಲ್ಲಿಯೇ ಮಾಡಿಸಿ ನೋಡುವ ಎಂದರು. ನಾವು ಮನೆಯನ್ನು ಒಳ್ಳೆಯ

ಬೆಲೆಗೇ ಮಾರಿ, ಹಣವನ್ನು ತೆಗೆದುಕೊಂಡು, ನಮ್ಮ ತಂದೆಯವರನ್ನು ಕರೆದು ಕೊಂಡು, ಸೋದರಮಾವನ ಕೂಡ ಮದರಾಸಿಗೆ ಹೊರಟು ಹೋದೆವು.

ಆಗ ನನ್ನ ಆವಸ್ಥೆ ಹೇಳತೀರದು. ಆ ಮನೆಯನ್ನು ಬಿಟ್ಟು ಹೋಗ ಬಹುದೆಂದು ನಾನು ಕನಸಿನಲ್ಲಿಯೂ ಎಣಿಸದ್ದಿಲ್ಲ. ನನಗೆ ಆ ಮನೆಯ ಮೇಲೆ ಅಷ್ಟು ಮಮತ ಅದೇಕೋ ತಿಳಿಯೆ. ಆ ಮನೆಯು ನಮ್ಮ ಮುತ್ತಾತಂದಿರ ಕಾಲದಿಂದ ಅಲ್ಲಿದ್ದಿತಂತೆ. ಆದ್ದರಿಂದ ನಾನು ದೊಡ್ಡವನಾದ ಮೇಲೆ ಹಣ ಗಳಿಸಿ, ಆ ಮನೆಯನ್ನು ಕೆಡವಿ ಚೆನ್ನಾಗಿ ಕಟ್ಟಬೇಕಂದು ಎಣಿಸಿದ್ದೆ ಹಳೆಯ ಮನೆಯ ಅಸ್ತಿಭಾರವು (ಅಡಿಗಲ್ಲು) ಹಾಗೇ ಇರ ಬೇಕೆಂದೂ ಕೆಲವೊಂದು ಬದಲಾವಣೆಗಳನ್ನು ಮಾಡಿ ಅದನ್ನು ಮಹಡಿಯ ಮನೆಯನ್ನಾಗಿ ಮಾಡಬೇಕೆಂದೂ ನಿರ್ಧರಿಸಿದ್ದೆ ಮಹಡಿಯ ಮೇಲಿನ ಮೂರು ಕೋಣೆಗಳು ನನಗೆ, ನನ್ನ ತಮ್ಮನಿಗೆ, ಮತ್ತು ತಂಗಿಗೆ ಹಂಚಲ್ಪ ಟ್ಟಿದ್ದವು ಮನೆಯ ಒಳಗೆ ಪ್ರವೇಶಿಸಿದೊಡನೆ ಮೊದಲು ಒಂದು ದೊಡ್ಡ ಡ್ರಾಯಿಂಗ್ ರೂಮು. ಬಲ ಮಗ್ಗುಲಲ್ಲಿ ತಂದೆಯವರ ಪೂಜಾ ಮಂದಿರ. ಎಡ ಮಗ್ಗುಲಲ್ಲಿ ಮಲಗುವ ಕೋಣೆ ಕಾಂಪೌಂಡು ಗೋಡೆಗೂ ಮನೆಗೂ ನಡುವೆಯಿದ್ದ ಅಂಗಳದಲ್ಲಿ ತೋಟಹಾಕಿ ಮಧ್ಯ ಒಂದು ಬೇವಿನ ಮರವನ್ನು ನಡುವುದೆಂದೂ ತೀರ್ಮಾನಿಸಿದೆ

ಬೇವಿನ ಎಲೆಯ ಬಣ್ಣದಂತೆ ಇರುವ ಹಸಿರು ಬಣ್ಣವನ್ನು ಮನೆಗೆ ಹಚ್ಚುವುದೆಂದು ತೀರ್ಮಾನಿಸಿದೆ. ಒಡಹುಟ್ಟಿದವರಿಗೂ ನನಗೂ ಇದರ ಬಗ್ಗೆ ಕೊಂಚ ಭಿನ್ನಾಭಿಪ್ರಾಯವು ಇತ್ತು ಈ ನನ್ನ "ಕಲ್ಪನಾ ವಿಲಾಸ"ಕ್ಕೆ ನೀಲಿ, ಹಸುರು, ಕೆಂಪು ಬಣ್ಣಗಳನ್ನು ಕೊಡಬೇಕೆಂದು ತಮಗೆ ತೋಚಿದ ಹಾಗೇ ಹೇಳಿದರು ಆದರೆ ನನಗೆ ಬೇಕಾಗಿದ್ದುದೂ ಮನಸ್ಸಿಗೆ ಬಂದುದೂ ಎಲೆಹಸುರು ಮಾತ್ರ ಆ ಹಸುರು ಗಿಡದ ಮರೆಯಲ್ಲಿ ಮರೆಮರೆಯಾಗಿ ಕಾಣುವ ನನ್ನ ಮನೆಗೆ "ಕಲ್ಪನಾ ವಿಲಾಸ"ವೆಂದೇ ಹೆಸರಿಟ್ಟೆ. ನನ್ನ ತಂದೆ ಯವರು ಈ ಹೆಸರು ಬಹಳ ಚೆನ್ನಾಗಿದೆಯೆಂದು ಹೇಳಿದ್ದರು.

ಆದರೆ ನನ್ನ ಈ ಕನಸುಗಳೆಲ್ಲವೂ ನನಸಾಗುವ ವೇಳೆಗೆ ಆ ಮನೆ ಯನ್ನು ಮಾರಬೇಕಾದ ಪ್ರಸಂಗವು ಬಂದೀತೆಂದು ನಾನು ಎಣಿಸಿರಲಿಲ್ಲ. ನಾವು ಮದರಾಸಿಗೆ ಹೋದ ಕೆಲದಿನಗಳಿಗೆಲ್ಲ, ನಮ್ಮ ತಂದೆಯವರು ತೀರಿ ಕೊಂಡರು ನನ್ನ ಮಾವನ ಆದರದಲ್ಲಿ ನಾನು ಕಾಲೇಜು ಓದನ್ನು ಮುಗಿ ಸಿದೆ ಮತ್ತು ಇಂಜನೀಯರಿಂಗ್ ಪರೀಕ್ಷೆಯನ್ನೂ ಗಿಂಡೀ ಕಾಲೇಜಿನಲ್ಲಿ

ಮುಗಿಸಿದೆ. ನಮ್ಮ ಮಾವನವರ ಸಹಾಯದಿಂದ ರೈಲ್ವೆಯಲ್ಲಿಯೇ ಇಂಜಿನಿಯರ ನೌಕರಿಯು ದೊರೆತು ಈಗ ಹುಬ್ಬಳ್ಳಿಯ ವಿಭಾಗಕ್ಕೆ ವರ್ಗಾಯಿಸಲ್ಪಟ್ಟೆ.

ಆರು ವರ್ಷಗಳ ನಂತರ ಹುಬ್ಬಳ್ಳಿಗೆ ಬಂದ ನಾನು ನನ್ನ ಸ್ನೇಹಿತನ ಮನೆಯಲ್ಲಿ ಇರಬೇಕಾಯಿತು. ಬಂದ ಕೆಲವು ದಿನಗಳ ವರೆಗೂ ನಾನು ಆ ಬೀದಿಯಕಡೆ ಹೋಗಬಾರದೆಂದೇ ತೀರ್ಮಾನಿಸಿದ್ದೆ. ಆದರೆ ಆ ದಿನ ನಾನರಿಯದಂತೆ ನನ್ನ ಕಾಲುಗಳು ಆ ಬೀದಿಯ ಕಡೆ ಎಳೆದುಕೊಂಡು ಹೋದವು. ಸ್ವಲ್ಪ ದೂರದಿಂದಲೇ ಆ ಮನೆಯನ್ನು ನೋಡಿದೆ. ನನಗೇ ಆಶ್ಚರ್ಯವಾಯಿತು.

ನನ್ನ ಹಳೆಯ ಮನೆ ಈಗ ಹೊಸ ಹಸುರು ಬಣ್ಣದ ಮಹಡಿಯ ಮನೆಯಾಗಿ ನನ್ನ ಎದುರಿಗೆ ನಿಂತಿತ್ತು. ಅದರ ಅಂಗಳದಲ್ಲಿದ್ದ ಬೇವಿನ ಮರವು ನನ್ನನ್ನು ನೋಡಿ ಅಣಕಿಸುವಂತಿತ್ತು ನನ್ನ ಕಣ್ಣುಗಳನ್ನು ತಿಕ್ಕಿಕೊಂಡು ಮತ್ತೊಮ್ಮೆ ನೋಡಿದೆ. ನಾನು ಕಂಡದ್ದು ಕನಸಲ್ಲ. ನಿಜವಾಗಿಯೂ ನನ್ನ ಆ ಮನೆಯು ರೀತಿ ಬದಲುಗೊಂಡಿತ್ತು. ನಾನು ಅದನ್ನು ಹೇಗೆ ಮಾರ್ಪಡಿಸಿ ಕಟ್ಟಿಸಬೇಕೆಂದಿದ್ದೇನೋ ಅದೇ ರೀತಿಯಲ್ಲಿ ಕಟ್ಟಲ್ಪಟ್ಟಿತ್ತು.

ಬೇಗ ಬೇಗ ನಡೆದು ಮನೆಯ ಎದುರಿಗೆ ಹೋದೆ. ಮನೆಯ ಮುಂದೆ ತೂಗುಹಾಕಿದ್ದ ಬೋರ್ಡನ್ನು ನೋಡಿದೊಡನೆಯೇ ಗಾಬರಿಯಾದೆ "ವೆಂಕಟೇಶ ಬೋರ್ಡಿಂಗ್ ಅ್ಯಂಡ ಕಾಫಿಕ್ಲಬ್" ಎಂದು ಆ ಹಲಿಗೆಯಲ್ಲಿ ಬರೆದಿತ್ತು ತಟ್ಟನೆ ಒಳಗಿಂದ ಬಂದ ರೇಡಿಯೋ ಗಾಯನವು ನನ್ನನ್ನು ಮೂಕನನ್ನಾಗಿ ಮಾಡಿತು

ನನ್ನ ಮನಸ್ಸಿನಲ್ಲಿ ಕೋಪತ್ವೇಷಗಳೆರಡೂ ಕೂಡಿಕೊಂಡವು. ನಾನು ಹುಟ್ಟಿ ಬೆಳೆದ ಮನೆ, ನಾನು ಆಡಿಕೊಂಡ ಮನೆ ಕೊನೆಗೆ ಈ ಗತಿಗೆ ಬಂದಿತೇ, ನನ್ನ "ಕಲ್ಪನಾ ವಿಲಾಸ"ವು ಕೊನೆಗೆ ಹೋಟೆಲ್ ಮನೆಯಾಗಬೇಕೇ ಎಂದು ಚಿಂತಿಸಿದೆ.

ನನ್ನ ಕಾಲುಗಳು ನನ್ನನ್ನು ಹೋಟಲಿನ ಒಳಗೆ ಕರೆದುಕೊಂಡು ಹೋದುವು. ಅಲ್ಲಿ ಒಂದು ಕುರ್ಚಿಯಲ್ಲಿ ಕುಳಿತು ಸುತ್ತು ಮುತ್ತಲೂ ನೋಡಿದೆ. ಗೋಡೆಗಳೆಲ್ಲವೂ ಥಳ ಥಳ ಹೊಳೆಯುತ್ತಲಿದ್ದವು. ದೇವರುಗಳ ಮತ್ತು ದೇಶಸೇವಕರ ಚಿತ್ರಗಳು ಅಲ್ಲಲ್ಲಿ ಕಾಣಿಸುತ್ತಿದ್ದವು. ಆದರೆ ನಾನು ಆ ಹಾಲಿನಲ್ಲಿ ಕಪ್ಪು ಬಸಿಗಳ ಸಪ್ಪಳವನ್ನು ಕೇಳಲು ಬಯಸಿದ್ದಿಲ್ಲ. ಎರಡೂ

ಬದಿಗಳಲ್ಲಿ ಎರಡು ಕೋಣೆಗಳನ್ನು ಕಲ್ಪನೆಮಾಡಿದ್ದೆನಲ್ಲವೆ? ಅದರಂತೆ ಬಲಕ್ಕೊಂದು, ಎಡಕ್ಕೊಂದು ಕೋಣೆಗಳು ಕಂಡುಬಂದವು. ಹೊಟಲಿನ ಆಳು ತಂದುಕೊಟ್ಟ ಚಹಾವನ್ನು ನುಂಗಿ ಎಡ ಮಗ್ಗುಲಲ್ಲಿದ್ದ ಕೋಣೆಯಲ್ಲಿ ಇಣಿಕಿ ನೋಡಿದೆ. ನಾವು ಮಲಗುವ ಕೋಣೆಯಾಗಿರಬೇಕಾದ ಅದರಲ್ಲಿ ಯಾರೋ ಮೆಣಸಿನಕಾಯಿ ಪುಡಿ ಸೋಸುತ್ತಿದ್ದುದನ್ನು ಕಂಡೆ. ನನ್ನ ಕಣ್ಣುಗಳಲ್ಲಿ ನೀರು ಬಂತು ದೇವರ ಪೂಜೆಯ ಕೋಣೆಯೆಂದು ನಿಶ್ಚಯಿಸಿದ್ದ ಬಲ ಮಗ್ಗುಲಲ್ಲಿದ್ದ ಕೋಣೆಯಲ್ಲಿ ಯಾವನೋ ಓರ್ವನು ಪೂರಿ ಕರಿಯಲು ಹಿಟ್ಟು ಕಲಿಸುತ್ತಿದ್ದನು. ನನ್ನ ಹೃದಯದಲ್ಲಿ ಯಾರೋ ಕಲಸುಮೇಲೋಗರ ಮಾಡುತ್ತಿರುವಂತೆ ತೋರಿತು ನನಗೆ

ತೋಟದ ಕಡೆ ನೋಡಿದೆ ನಾನು ಕಲ್ಪಿಸಿದಂತೆ, ಬಹಳ ಚನ್ನಾಗಿ ಇಡಲ್ಪಟ್ಟಿತ್ತು ಆ ತೋಟ. ಆದರೆ ಅಲ್ಲಿ ಕೆಲಸದವನು ಪಾತ್ರೆಗಳನ್ನು ತೊಳೆಯುವುದನ್ನು ಕಂಡು ಮುಖವನ್ನತ್ತ ತಿರುಗಿಸಿಕೊಂಡೆ, ಎಲ್ಲಿ ನೋಡಿದರೂ ಕಸ, ಕಾಲುವೆಯ ನೀರು ತುಂಬಿತ್ತು ನನ್ನ ಕಲ್ಪನೆಯಂತೆ ಮನೆ ಕಟ್ಟಿದ್ದನ್ನು ನೋಡಿದರೆ ಎಷ್ಟು ಆನಂದವಾಗುತ್ತಿತ್ತೋ, ಅದು ಹೋಟಲಿನ ಮನೆಯಾಗಿ ಮಾರ್ಪಾಟಾದುದರಿಂದ ನನಗೆ ಅದಕ್ಕಿಂತಲೂ ಹೆಚ್ಚು ದುಃಖವಾಯಿತು ಇಂತಹ ರಸಿಕತೆಯಿಂದ, ಆ ಮನೆಯನ್ನು ಕಟ್ಟಿಸಿದವರು ಒಂದು ಸಾಧಾರಣವಾದ ಕಾಫೀ ಹೊಟಲಿಗೆ ಏಕೆ ಕೊಟ್ಟಿರಬಹುದೆಂಬುದೇ ನನಗೆ ತಿಳಿಯದೇ ಹೋಯಿತು

× × ×

ಹುಬ್ಬಳ್ಳಿಯಲ್ಲಿ ಓರ್ವ ಸ್ನೇಹಿತನ ಮನೆಯಲ್ಲಿ ಇಳಿದುಕೊಂಡಿದ್ದೆನೆಂದು ಹೇಳಿದ್ದೇನಲ್ಲವೇ? ಅದು ಮದರಾಸಿನಲ್ಲಿ ನನ್ನೊಂದಿಗೆ ಇಂಜಿನಿಯರ್ ಆಗಿದ್ದ ನನ್ನ ಸ್ನೇಹಿತನ ಮನೆ.

ನನಗೆ ಹುಬ್ಬಳ್ಳಿ ವಿಭಾಗಕ್ಕೆ ವರ್ಗವಾದುದನ್ನು ತಿಳಿದ ನನ್ನ ಕಾಲೇಜಿನ ಸಹಪಾಠಿ ದೇಸಾಯಿ "ನೀನು ಅಲ್ಲಿ ಹೋದ ಮೇಲೆ ವಸತಿಗಾಗಿ ತೊಂದರೆ ಪಡುವುದು ಬೇಡ ನಿನಗೆ ವಾಸ್ತವ್ಯಕ್ಕೆ ಮನೆ ಸಿಗುವವರೆಗೂ ನಮ್ಮ ಮನೆಯಲ್ಲಿಯೇ ಇರು'' ಎಂದಿದ್ದ ದೇಸಾಯಿಯ ವೃದ್ಧ ತಂದೆ ತಾಯಿಗಳು ಅದೇ ಮನೆಯಲ್ಲಿ ಇರುತ್ತಿದ್ದರು. ದೇಸಾಯಿಯ ತಾಯಿ ನನಗೆ ಮದರಾಸಿನಲ್ಲಿದ್ದಾಗಲೇ ಪರಿಚಯವಾಗಿದ್ದರು.

ದೇಸಾಯಿಯ ತಂದೆ ನನಗೆ ಮಾಡಿದ ಉಪಕಾರ ಅಷ್ಟಿಷ್ಟಲ್ಲ. ನಾನು ಬಂದೊಡನೆ ಮುಂದೆ ವರಾಂಡದ ಪಕ್ಕದಲ್ಲಿದ್ದ ಕೋಣೆಯನ್ನು ನನಗಾಗಿ ತೆರೆವು ಮಾಡಿಕೊಟ್ಟರು. ಅವರ ಹೆಂಡತಿ "ನೀನೂ ನನ್ನ ಮಗನಂತೆ. ಹೋಟಲಿನಲ್ಲಿ ಊಟ ಮಾಡಿ ಶರೀರ ಆರೋಗ್ಯ ಕೆಡಿಸಿಕೊಳ್ಳುವುದು ಬೇಡ ಇಲ್ಲಿಯೇ ಊಟ ಮಾಡು." ಎಂದು ಉಪಚರಿಸಿದರು. ಅವರ ಪ್ರೀತಿ ವಾತ್ಸಲ್ಯಗಳಿಂದ ತಪ್ಪಿಸಿಕೊಳ್ಳುವುದು ನನಗೆ ಕಷ್ಟವಾಗಿತ್ತು.

ನಾನು ಹುಬ್ಬಳ್ಳಿಗೆ ಬಂದು ನಾಲ್ಕೈದು ದಿನಗಳಾಗಿರಬಹುದು ಅಂದು ಭಾನುವಾರ. ಹಾಲಿನಲ್ಲಿದ್ದ ಈಜೀ ಚೇರಿನ ಮೇಲೆ ಕುಳಿತು ನನ್ನ ಆ ಮನೆಯನ್ನು, ಅದರ ಈಗಿನ ಸ್ಥಿತಿಯನ್ನೂ ಕುರಿತು ವಿಚಾರಿಸುತ್ತಲಿದ್ದೆ ಹೊರಗಡೆಯಿಂದ ಯಾರೋ ಬರುವ ಸದ್ದು ಕೇಳಿಸಿತು ತಲೆಯೆತ್ತಿ ನೋಡಿದಾಗ ಒಂದು ದಂತದ ಗೊಂಬೆ ಜೀವದಿಂದ ನಡೆದು ಬಂದು ನನ್ನೆದುರಿಗೆ ನಿಂತಂತಿತ್ತು. ಸುಮಾರು ಹದಿನಾರು ವರುಷದ ತರುಣಿ "ಅತ್ತೆ" ಎಂದು ಕರೆಯುತ್ತ ಒಳಗೆ ನುಗ್ಗಿದಳು. ತಟ್ಟನೆ ನನ್ನ ಮೇಲೆ ಅವಳ ದೃಷ್ಟಿ ಬಿದ್ದುದರಿಂದ ಒಂದು ಕ್ಷಣ ತಡೆದು ನಿಂತಳು. ಅವಳ ಮುಖದಲ್ಲಿ ಸಂಕೋಚ ತುಂಬಿ ತುಳುಕುತ್ತಿತ್ತು.

"ಅತ್ತೆ ಒಳಗೆ ಇದ್ದಾಳೆ." ಎಂದು ನಾನು ಹೇಳಿದೆ

ನನ್ನನ್ನು ಒಂದು ಬಾರಿ ಅಗಲ ಕಣ್ಣುಗಳಿಂದ ನೋಡಿ ಒಳಗೆ ಓಡಿದಳು ಆ ನಳಿನ ನಯನೆ. ಆ ಹೆಣ್ಣು ಕೆಲಹೊತ್ತು ಅತ್ತೆಯವರೊಡನೆ ಮಾತನಾಡುತ್ತಲಿದ್ದು ಅನಂತರ ಹೊರಟುಹೋದಳು. ಅವಳ ಮುಖವನ್ನು ಮರೆಯಲು ನನ್ನಿಂದಾಗಲಿಲ್ಲ. ಆ ಹೆಣ್ಣು ಯಾರು? ಅವಳು ದೇಸಾಯಿಯ ತಾಯಿಯನ್ನು ಅತ್ತೆಯೆಂದು ಏಕೆ ಕರೆದಳು? ಎಂಬ ಪ್ರಶ್ನೆಗಳು ನನ್ನನ್ನು ವೇಧಿಸಿದವು.

ಒಂದು ದಿನ ಸಂಜೆ ದೇಸಾಯರು ನನ್ನನ್ನು ನೋಡಿ "ಬಹಳ ಚಿಂತಾಕ್ರಾಂತನಾದಂತಿದೆ, ಏನಪ್ಪ ಕಾರಣ?" ಎಂದು ವಿಚಾರಿಸಿದರು. ನಾನು ಆ ಬೀದಿಯಲ್ಲಿದ್ದ ನನ್ನ ಮನೆಯ ಬಗ್ಗೆ ಪ್ರಸ್ತಾಪವನ್ನೆತ್ತಿದೆ.

"ದೊಡ್ಡ ಬೀದಿಯಲ್ಲಿ ನಮಗೆ ಒಂದು ಮನೆ ಇತ್ತು. ಆರು ವರ್ಷಗಳ ಹಿಂದೆ ನಾವು ಈ ಊರನ್ನು ಬಿಟ್ಟು ಹೋಗುವಾಗ ಅದನ್ನು ಮಾರಿ ಬಿಟ್ಟು ಹೋಗಬೇಕಾಗಿ ಬಂತು. ಈಗ ನೋಡಿದರೆ ಆ ಮನೆಯನ್ನು ಯಾರೋ

ಹೊಸದಾಗಿ ಕಟ್ಟಿಸಿ ಹೋಟೆಲಿಗೆ ಬಾಡಿಗೆಗೆ ಕೊಟ್ಟಂತಿದೆ. ಕೊಂಚ ಹೊತ್ತಿನ ಮುಂಚೆ ನಾನು ಅಲ್ಲಿ ಕಾಫಿ ಕುಡಿದು ಬಂದೆ." ಎಂದೆ.

"ಯಾವ ಮನೆಯನ್ನು ಹೇಳುತ್ತಿ" ಎಂದು ಕೇಳಿದಳು ಅತ್ತೆ.

"ದೊಡ್ಡ ಬೀದಿಯಲ್ಲಿ ವೆಂಕಟೇಶ ಬೋರ್ಡಿಂಗ್ ಆ್ಯಂಡ ಕಾಫೀಕ್ಲಬ್" ಇದೆಯಲ್ಲ! ಅದನ್ನೇ ನಾನು ಹೇಳುವುದು. ಆರು ವರುಷಗಳ ಮುನ್ನ ಅದು ನಮ್ಮ ಮನೆಯಾಗಿದ್ದಿತು ನಾನು ಹುಟ್ಟಿ ಬೆಳೆದುದು ಅದೇ ಮನೆಯಲ್ಲಿ"

"ವೆಂಕಟೇಶ ಕಾಫಿಕ್ಲಬ್! ಅದು ನಮ್ಮ ರತ್ನಳ ಮನೆಯಲ್ಲವೇ? ರತ್ನಳೇ ಅದನ್ನು ಬಾಡಿಗೆಗೆ ಕೊಟ್ಟಿದ್ದಾಳೆ" ಎಂದಳು ಅತ್ತೆ, ದೇಸಾಯಿಯರನ್ನು ನೋಡಿ.

"ಯಾವ ರತ್ನ" ಎಂದು ನಾನು ಕೇಳಿದೆ

ಅತ್ತೆ ನಕ್ಕಳು.

"ಆಗಾಗ ನಮ್ಮ ಮನೆಗೆ ಒಬ್ಬ ಹುಡುಗಿ ಬರುತ್ತಾಳಲ್ಲಾ ನೀನೂ ಕೂಡ ಅವಳನ್ನು ದಿಟ್ಟಿಸಿ ನೋಡುತ್ತಿರುತ್ತೀ? ಅದೇ ಹೆಣ್ಣು." ಆ ಹೆಣ್ಣೇ ನನ್ನ "ಕಲ್ಪನಾ ವಿಲಾಸ"ದ ಸರ್ವಾಧಿಕಾರಿ! ಇಷ್ಟು ದಿನ ಸುಮ್ಮನಿದ್ದು ಈಗ ನನ್ನ ಮನಸ್ಸನ್ನು ಸೂರೆಗೊಂಡ ರತ್ನಳೇ ಮನೆಯ ಅಧಿಕಾರಿ! ಕೊಂಚ ಹೊತ್ತು ನನಗೇನೂ ತೋಚದಂತಾಯಿತು

"ಹದಿನೈದು ಸಾವಿರ ರೂಪಾಯಿಗಳು ಮುಂಗಡ ಹಣ ತೆಗೆದುಕೊಂಡು ಹೋಟೆಲಿನವರಿಗೆ ಮೂರು ವರ್ಷಕ್ಕೆ ಬಾಡಿಗೆಗೆ ಬಿಟ್ಟಿದ್ದಾಳೆ. ಅವರ ಇನ್ನೊಂದು ಮನೆ ಅಲ್ಲಿಯೇ ಮಗ್ಗುಲಲ್ಲಿದೆ. ಅದರಲ್ಲಿ ಅವಳು, ತನ್ನ ಅತ್ತೆ ಯೊಂದಿಗೆ ಇರುತ್ತಾಳೆ ತಂದೆ ತಾಯಿ ಇಲ್ಲದ ಹುಡುಗಿ; ಬಹಳ ಜಾಣೆ ನಾನು ಎಂದರೆ ಅವಳಿಗೆ ಅತಿ ಪ್ರೀತಿ ಬೆಳಗು ತಪ್ಪಿದರೂ ತಪ್ಪಬಹುದು. ಅವಳು ನನ್ನನ್ನು ನೋಡಲು ತಪ್ಪುವದಿಲ್ಲ. ಅವಳ ತಂದೆ ಆ ಮನೆಯನ್ನು ಕೊಂಡು ಇವಳ ಹೆಸರಿನಲ್ಲಿಟ್ಟು ಹೋಗಿಬಿಟ್ಟಿದ್ದಾನೆ ಅದು ನಿಮ್ಮ ಮನೆ ಯೆಂದು ಇಷ್ಟು ದಿನ ನನಗೆ ತಿಳಿಯದು." ಎಂದರು ಅತ್ತೆ.

ನನಗೆ ಕೋಪವು ಉಕ್ಕೇರಿತು. ಇಷ್ಟು ಸುಂದರವಾಗಿ ಕಷ್ಟಪಟ್ಟು ಕಟ್ಟಿಸಿ, ಕೊನೆಗೆ ಒಂದು ಹೋಟೆಲಿಗೆ ಬಾಡಿಗೆ ಕೊಡಲು ರತ್ನಳಿಗೆ ಇಷ್ಟು ಹಣದಾಸೆಯೇಕೆ? ರತ್ನಳು ಜಾಣೆ ಎಂದು ಅತ್ತೆ ಹೇಳಿದುದು ಸರಿಯಾಗಿದೆ ಇಲ್ಲದೆ ಹೋದರೆ ಇಂತಹ ಕೆಲಸ ಮಾಡಲು ಅವಳಿಗೆ ಧೈರ್ಯವು ಹೇಗೆ ಬರಬೇಕು? ಎಂದು ಆಲೋಚನೆಯ ಸಾಗರದಲ್ಲಿ ಮುಳುಗಿದೆ.

"ಹೋಟಲಿನ ಯಜಮಾನನೇನಾದರೂ ಈ ಮನೆಯನ್ನು ಹೀಗೆ ಹೊಸದಾಗಿ ಕಟ್ಟಿಸಿದನೇ?" ಎಂದು ಮತ್ತೆ ಕೇಳಿದೆ.

ಅದಕ್ಕೆ ದೇಸಾಯರು "ಇಲ್ಲ, ಇಲ್ಲ. ಎಲ್ಲವೂ ರತ್ನಳ ಪ್ಲ್ಯಾನೇ ಆ ಮನೆಯನ್ನು ಕಟ್ಟುವಾಗ ಅವಳ ತಂದೆಯು ಬದುಕಿದ್ದರು ಅವರು ನನ್ನ ಸ್ನೇಹಿತರು ಮಗಳ ಕೋರಿಕೆಯಂತೆ ಮನೆಯನ್ನು ಹೊಸದಾಗಿ ಕಟ್ಟಿಸಿದ ನೆಂದು ಆಗಾಗ್ಗೆ ನನ್ನೊಡನೆ ಹೇಳುತ್ತಿದ್ದರು." ಎಂದಾಗ ನನ್ನ ಮೈ ಪುಲಕಿತ ವಾಯ್ತು.

ಇದೆಲ್ಲವೂ ರತ್ನಳ "ಪ್ಲ್ಯಾನ್" ಇರಬಹುದೇ? ನಾನು ಯೋಚಿಸಿದ ಮನೆಯ ಕಲ್ಪನೆ ಅವಳಿಗೂ ತಿಳಿದಂತಿದೆ. ನಮ್ಮೊಳಗೆ ಎಂತಹ ಸಾಮರಸ್ಯ? ಆದರೂ ಮನೆಯನ್ನು ಹೋಟಲಿಗೆ ಬಾಡಿಗೆ ಕೊಟ್ಟ ಅವಳ ಹಣದಾಸೆ ಯನ್ನು ನಾನು ಮನ್ನಿಸಲಾರದೇ ಹೋದೆ.

ಮರು ದಿನ ಸಂಜೆ ಆಫೀಸಿನಿಂದ ಮನೆಗೆ ಬಂದವನೇ ರತ್ನಳು ಅಲ್ಲಿ ಕುಳಿತಿರುವುದನ್ನು ನೋಡಿದೆ "ಅತ್ತೆ ಹೊರಗೆ ಹೋಗಿದ್ದಾರೆ ಕೊಂಚ ಹೊತ್ತು ಇಲ್ಲಿಯೇ ಇರುವಂತೆ ಹೇಳಿ ಹೋದರು" ಎಂದಳು ರತ್ನ

ನಾನು ಮಾತನಾಡದೇ ಕೋಟು ಬಿಚ್ಚಿ ಕೋಟು ಸ್ಟ್ಯಾಂಡಿಗೆ ಹಾಕಿ ಹೊರಗಿನ ತೋಟದ ಕಡೆ ನೋಡುತ್ತ ಕಿಟಕಿಯ ಬಳಿ ನಿಂತು ಬಿಟ್ಟೆ ನನಗೆ ಅವಳೊಂದಿಗೆ ಮಾತನಾಡಲು ಇಷ್ಟವಿರಲಿಲ್ಲ.

''ದೊಡ್ಡ ಬೀದಿಯಲ್ಲಿರುವ "ವೆಂಕಟೇಶ ಕಾಫಿಕ್ಲಬ್" ನಿಮ್ಮ ಮನೆ ಯಾಗಿತ್ತೆಂದು ಬೆಳಿಗ್ಗೆ ಅತ್ತೆಯವರು ಹೇಳಿದರು ನಿಮ್ಮಿಂದಲೇ ನಮ್ಮ ತಂದೆಯವರು ಅದನ್ನು ಕೊಂಡಿರಬಹುದು'' ಎಂದು ಅವಳಾಗಿಯೇ ಆ ಮಾತನ್ನು ಪ್ರಾರಂಭಿಸಿದಳು.

"ನಾನು ಹುಟ್ಟಿದ ಕೋಣೆಯಲ್ಲಿ ಮೆಣಸಿನಕಾಯಿ ಅರೆಯುತ್ತಿರುವ ದನ್ನು ಕಂಡೆ-ಬಹಳ ಸಂತೋಷಪಟ್ಟೆ'' ಎಂದು ಕೊಂಚ ಬಿರುಸಾಗಿಯೇ ನುಡಿದು ಸುಮ್ಮನಾದೆ.

ರತ್ನಳ ಮುಖದಲ್ಲಿ ವೇದನೆ ತೇಲಿ ಬರುವುದನ್ನು ಕಂಡೆ.

''ನಾನೇ ಪ್ಲ್ಯಾನ್ ಮಾಡಿ, ಕಟ್ಟಿಸಿದ ಸುಂದರ ಮನೆಯನ್ನು ಹೋಟಲಿಗೆ ಬಾಡಿಗೆಗೆ ಬಿಡಲು ನನಗೂ ಇಷ್ಟವಿರಲಿಲ್ಲ, ಆದರೆ ಸಂದರ್ಭಗಳು ಹಾಗೊದಗಿ ಬಂದವು. ಆ ಸಮಯದಲ್ಲಿ ಹದಿನೈದು ಸಾವಿರ ರೂಪಾಯಿ

ಗಳು ಇಲ್ಲದೆ ಹೋದರೆ ನನ್ನ ಮದುವೆ ನಿಂತು ಹೋಗುವ ಪ್ರಸಂಗದಲ್ಲಿತ್ತು ವರನನ್ನೂ, ಮುಹೂರ್ತವನ್ನೂ ನಿಶ್ಚಯಿಸಿಯಾಗಿತ್ತು. ನನ್ನ ತಂದೆ ನನಗೆ ಬೇರೇನೂ ಆಸ್ತಿ ಬಿಟ್ಟು ಹೋಗಲಿಲ್ಲ. ಆಗ ಹೋಟೆಲಿನ ಯಜಮಾನನು ಹೋಟೆಲನ್ನು ಮೂರು ವರುಷಕ್ಕೆ ಬಾಡಿಗೆಗೆ ತೆಗೆದುಕೊಂಡು ಹಣವನ್ನು ಕೈಯಲ್ಲಿ ಕೊಟ್ಟರು ಅದಕ್ಕೆ ಒಪ್ಪದೆ ಬೇರೆ ಗತ್ಯಂತರವಿರಲಿಲ್ಲ. ಆಗ ಆದ ಮನಸ್ಸಿನ ಸಂಕಟವನ್ನು ವರ್ಣಿಸಲಸಾಧ್ಯ " ಎಂದು ರತ್ನ ತನ್ನ ಕಣ್ಣೊರಸಿ ಕೊಂಡಳು

"ಹಾಗಾದರೆ ನಿನ್ನ ಮದುವೆ... . ''

ನನ್ನ ಮನಸ್ಸಿನ ದುಃಖವನ್ನರಿತವಳಂತೆ ರತ್ನ ನನ್ನನ್ನು ತಡೆದು– "ಇಲ್ಲ. ಆಕಾರಣವಾಗಿ ಆ ಮದುವೆ ನಿಂತು ಹೋಯಿತು. ಆದರೆ ಬಾಡಿಗೆಗೆ ಬಿಡುವುದು ಒಪ್ಪಂದವಾಗಿ ಪತ್ರ ಬರೆದಾಗಿದ್ದುದರಿಂದ ಅದರಂತೆ ನಡೆಯಲೇಬೇಕಾಯಿತು. ಹಿರಿಯ ಅದೃಷ್ಟವು ಬರಲಿರುವಾಗ ಆ ಮದುವೆ ಹೇಗಾಗುತ್ತಿತ್ತು?'' ಅವಳ ಮುಖವು ನೆಲವನ್ನೇ ನೋಡುತ್ತಿತ್ತು.

''ಯಾವ ಹಿರಿಯ ಅದೃಷ್ಟವು?''

''ತಿಳಿಯಲಿಲ್ಲವೆ?" ಎಂದು ನನ್ನನ್ನು ಓರೆಗಣ್ಣಿನಿಂದ ನೋಡಿದಳು. ನನ್ನ ಮನದಲ್ಲಿ ಕುತೂಹಲವೂ ಹೆಮ್ಮೆಯೂ ಒಡಮೂಡಿದವು.

ಹಿಂದುಗಡೆಯಿಂದ ಯಾರೋ ಬಂದಂತೆ ಭಾಸವಾಯಿತು. ತಿರುಗಿ ನೋಡಿದೆ

''ನೋಡಿದಿರಾ, ಇವರೀರ್ವರಿಗೂ ಗಂಟು ಹಾಕಬೇಕೆಂದಿದ್ದಿರಲ್ಲಾ ಆ ಶ್ರಮವು ಇನ್ನು ಮೇಲೆ ನಿಮಗಿಲ್ಲ " ಎಂದು ಅತ್ತೆ, ದೇಸಾಯರನ್ನು ಕುರಿತು ಹೇಳುತ್ತಿದ್ದಳು.

ನಾಚಿಕೆ ಹೊರಸೂಸುತ್ತಿದ್ದ ಮುಖವನ್ನು ಮರೆಯಿಸಿಕೊಂಡು ರತ್ನಳು ಒಳಗೋಡಿದಳು. ಕೆಲದಿನಗಳಲ್ಲಿಯೇ ನನ್ನ ಮದುವೆಯು ರತ್ನಳೊಂದಿಗೆ ನೆರವೇರಿತು.

ಮುಂದೆ ಒಂದು ವರುಷದ ನಂತರ ನಾನೂ ರತ್ನಳೂ ಕೈ ಜೋಡಿಸಿ ಕೊಂಡು ನಮ್ಮ "ಕಲ್ಪನಾ ವಿಲಾಸ''ದಲ್ಲಿ ಪ್ರವೇಶಿಸಿದೆವು.

ಇನ್ನೂ ಅದನ್ನು ''ಕಲ್ಪನಾ ವಿಲಾಸ" ವೆಂದೇ ಕರೆಯಬೇಕೇ? ನೀವೇ ಹೇಳಿ ನೋಡುವ.

# ದಾರಿ ತೋರಿದ ದೈವ

"ಮನೆಯ ಆಳನ್ನು ಎಷ್ಟರಲ್ಲಿಡಬೇಕೋ ಅಷ್ಟರಲ್ಲಿಡಬೇಕು. ರಾಜಪ್ಪನ್ನ ನೀವು ತಲೆಮೇಲಿಟ್ಟುಕೊಂಡು ತಿರುಗುವುದು ನನಗೇನೋ ಸರಿಕಂಡಿಲ್ಲ. ಯಾವುದಾದರೂ ನಾವು ಹೇಳಿದುದನ್ನು ಅವನು ಕೇಳಿದರಲ್ಲವೇ? ಅವನ ಮಾತಿನಂತೆ ನಡೆಯುತ್ತಿರುವಿರಿ. ರಾಮತೀರ್ಥಕ್ಕೆ ಹೋಗೋಣವೆಂದು ಬೇಡಿಕೊಳ್ಳಲು ಪ್ರಾರಂಭಿಸಿ ಆರು ತಿಂಗಳಾಯಿತು. ಆದರೆ ಅವನು ಬೇಡ ಅನ್ನುತ್ತಾನೆ ಎಂದು ನೀವೇ ನಿಂತು ಬಿಡುತ್ತೀರಿ. ನೀವು ಸೇವಕನ ಮಾತನ್ನು ಕೇಳುವಿರಾ? ನನ್ನ ಮಾತನ್ನು ಕೇಳುವಿರಾ?" ಎಂಬ ಲೀಲಳ ಮಾತು ಸ್ವಲ್ಪ ಗಡುಸಾಗಿತ್ತು. ಅವಳು ಕೋಪಗೊಂಡಿರಬಹುದೆಂದು ಮಾತನಾಡಿಸಿದರೆ ಕಷ್ಟವೆಂದು, ತಿಳಿದು ಸುಮ್ಮನಾದೆ.

ಆ ದಿನ ಸಂಜೆ ನಾನು, ಲೀಲಾ, ಮತ್ತು ಪ್ರಕಾಶನೊಂದಿಗೆ ಕೂಡಿ ರಾಮತೀರ್ಥಕ್ಕೆ ಹೋಗಲು ತೀರ್ಮಾನಿಸಿದ್ದೆವು. ನಾನು ಆ ನಿಲ್ದಾಣಕ್ಕೆ ಸ್ಟೇಷನು ಮಾಸ್ತರರಾಗಿ ಬಂದು ಆರು ತಿಂಗಳಾಗಿದ್ದರೂ ರಾಮತೀರ್ಥಕ್ಕೆ ಹೋಗಿ ಬರಲು ಸಮಯ ಸಿಕ್ಕಿದ್ದಿಲ್ಲ.

ರಾಮತೀರ್ಥ ಒಂದು ಸುಂದರ ಪ್ರದೇಶ. ಅಲ್ಲಿ ಪುರಾತನ ಶಿಲ್ಪಕಲಾ ನೈಪುಣ್ಯತೆಯಿಂದ ಮೆರೆವ ಮಂಟಪಗಳೂ, ಒಂದು ದೇವಾಲಯವೂ ಇದ್ದ ಹಾಗೆ ಕೇಳಿದ್ದಳು ಲೀಲಾ, ಮತ್ತು ಅಲ್ಲಿಯ ಒಂದು ಝರಿಯು ಸುಮಾರು ಮುನ್ನೂರು ವರುಷಗಳು ಪುರಾತನವದ್ದೆಂದೂ, ಅಗಿನಿಂದಲೂ ನೀರು ಹಾಗೆಯೇ ಬೀಳುತ್ತಿದೆಯೆಂದೂ ಕೇಳಿದ್ದಳು. ಆರು ತಿಂಗಳುಗಳಿಂದ ಅಲ್ಲಿಗೆ ಹೋಗಬೇಕೆಂದು ಹೇಳುತ್ತಿದ್ದಳು. ಅವಳ ಆಶೆಯನ್ನು ಈಡೇರಿಸಿದ್ದಿಲ್ಲ. ಈಗ ರಾಜಪ್ಪನಿಗೆ ಅಲ್ಲಿಗೆ ಹೋಗಿಬರಲು ಸಂದರ್ಭ ಕಲ್ಪಿಸಿಕೊಂಡು, ಸಾಮಗ್ರಿ ಸಂಗ್ರಹಿಸಲು ಹೇಳಿದೆ. ಆದರಿಂದ ಲೀಲಳ ಆನಂದಕ್ಕೆ ಪಾರವೇ ಇಲ್ಲ. ಆದರೆ ಆಗ ರಾಜಪ್ಪನು ಆಡಿದ ಮಾತುಗಳು ಅವಳಿಗೆ ಮತ್ತೆ ಕೋಪವನ್ನು ತಂದಿತು. "ಇಲ್ಲ ಮಾಸ್ತರರೇ, ಬರುವ ತಿಂಗಳು ಬೆಳದಿಂಗಳಿನಲ್ಲಿ ಅಲ್ಲಿಗೆ ಹೋಗೋಣ. ಈಗ ಅಲ್ಲಿಗೆ ಹೋಗೋದು ಒಳ್ಳೆಯದಲ್ಲ'' ಎಂದು ಹೇಳಿ ರಾಜಪ್ಪನು ಪ್ರಕಾಶನನ್ನೆತ್ತಿಕೊಂಡು ಮಾರ್ಕೆಟ್ಟಿಗೆ ಹೊರಟು ಹೋದ.

ನಾನೂ ಪ್ರಯಾಣದ ಯೋಚನೆಯನ್ನು ಬಿಟ್ಟುಕೊಟ್ಟೆ. ಮುಂದೆ ಒಂದು ದಿನ ನಾನು ಏನೋ ಓದುತ್ತಾ ಕುಳಿತಿದ್ದೆ. ಕೋಪದಿಂದ ಲೀಲಾ ನನ್ನ ಬಳಿ ಬಂದು ಸುಮ್ಮನೆ ನಿಂತಳು.

"ಲೀಲಾ"

"........"

"ರಾಮತೀರ್ಥ ಎಲ್ಲಿಯೂ ಓಡಿಹೋಗುವುದಿಲ್ಲ ಲೀಲಾ, ರಾಜಪ್ಪ ಕಾರಣವಿಲ್ಲದೇ ಹೇಳುವುದಿಲ್ಲ ಆ ಕಡೆ ಕಳ್ಳರ ಹಾವಳಿ ಬಹಳ ಎಂದು ನಾನೂ ಕೇಳಿದ್ದೇನೆ ಸುಮ್ಮನೇ ಅವನ ಮೇಲೆ ಸಿಟ್ಟಿಗೇಳಬೇಡ." ಹಾವಾಡಿಗನು ಪುಂಗಿಯನ್ನು ನಿಲ್ಲಿಸಿದರೆ ಹಾವಿನ ರೋಷವು ಹೆಚ್ಚಾಗುವಂತೆ ನಾನು ಮಾತು ನಿಲ್ಲಿಸಿದೊಡನೆ ಅವಳು ಹೆಚ್ಚಿನ ಕೋಪದಿಂದ "ಇನ್ನೂರು ರೂಪಾಯಿ ಸಂಬಳದ ಮಾಸ್ತರರು ಕೇವಲ ಒಬ್ಬ ಪೋರ್ಟರನ ಮಾತಿನಂತೆ ನಡೆಯುತ್ತಿದ್ದಾರೆ ಎಂದರೆ ಅವಮಾನವಲ್ಲವೇ? ನೀವೇನೋ ಅವನನ್ನು ದೈವವೆಂದು ತಿಳಿದಿರುವಿರಿ ಅವನಿಗೊಂದು ದೇವಾಲಯವನ್ನೂ ಕಟ್ಟಿದರೂ ಕಟ್ಟಿಬಿಡುವಿರಿ ನಮ್ಮ ತಂದೆಯವರಲ್ಲಿ ಕೂಡ ಆಳುಗಳಿದ್ದಾರೆ. ಆದರೆ ಅವರಿಗೆ ಇಷ್ಟೊಂದು ಧೈರ್ಯ ಸಲುಗೆಗಳಿಲ್ಲ ಅಪ್ಪನೊಂದಿಗೆ ಮಾತನಾಡಲೂ ಕೂಡ ಗಾಬರಿಯಾಗುತ್ತಾರೆ "

"ಲೀಲಾ, ನನ್ನ ಮಟ್ಟಿಗೆ ರಾಜಪ್ಪನು ದೈವವೇ ಸರಿ. ಗುಡಿಯಲ್ಲಿರುವ ದೈವ ನಮ್ಮೊಡನೆ ಮಾತನಾಡದು ಆದರೆ ಇದು ವಾಕ್ಸಿದ್ಧಿಯುಳ್ಳ ದೈವ ಈ ದಿನ ನಾನು ಈ ಪದವಿಗೆ ಬರಲು ಕಾರಣ ಈ ರಾಜಪ್ಪನೇ ಆ ಕಥೆಯನ್ನು ಕೇಳಿದರೆ ನೀನು ರಾಜಪ್ಪನನ್ನು ದೈವವೆಂದು ಕಾಣುವಿ. ಹೇಳುತ್ತೇನೆ ಕೇಳು" ಎಂದು ವಿವರಿಸಲಾರಂಭಿಸಿದೆ.

ಮೊದಲು ಅವಳಿಗೆ ನನ್ನಲ್ಲಿ ನಂಬಿಕೆ ಹುಟ್ಟಲಿಲ್ಲ. ಆದರೆ ಕಥೆ ಕೇಳುತ್ತ ಕೇಳುತ್ತ ಅವಳ ಕುತೂಹಲ ಹೆಚ್ಚಾಯಿತು.

"ಎಂಟು ವರುಷಗಳ ಹಿಂದೆ ನಾನು ಗುರೋಲಿ ಸ್ಟೇಷನಿಗೆ ಮಾಸ್ತರರೆಂದು ವರ್ಗಾಯಿಸಲ್ಪಟ್ಟೆ. ಗುರೋಲಿ ಅಗಾಧ ಅರಣ್ಯದ ಮಧ್ಯದಲ್ಲಿರುವ ಒಂದು ಚಿಕ್ಕ ಸ್ಟೇಷನು; ಹಳ್ಳಿಗಾಡು. ನಾನೊಬ್ಬನೇ ಎಲ್ಲ ಕೆಲಸಗಳನ್ನೂ ಮಾಡಬೇಕಾಗಿತ್ತು ನನ್ನನ್ನು ಬಿಟ್ಟರೆ ಪೋರ್ಟರ ಬಸಪ್ಪ, ಗೇಟಮನ ರಾಜಪ್ಪ. ಇಬ್ಬರೇ ಆ ಸ್ಟೇಷನಿನ ಕೆಲಸಗಾರರು ಬಸಪ್ಪ ಬಹಳ ಒಳ್ಳೆ

ಯುವ. ಹೆಚ್ಚಾಗಿ ಮಾತನಾಡುವವನಲ್ಲ; ತಾನೇನೋ ತನ್ನ ಕೆಲಸವೇನೋ

ರಾಜಪ್ಪನು ಹಾಗಲ್ಲ. ನನಗಿಂತಲೂ ವಯಸ್ಸಿನಲ್ಲಿ ಬಹಳ ದೊಡ್ಡವನು. ಯಾವಾಗಲೂ ಮಾತು. ಅವನ ಬಾಯಿ ಒಂದು ನಿಮಿಷವಾದರೂ ಸುಮ್ಮನಿರುವುದಿಲ್ಲ. ಸರಿಯಾದ ಹೊತ್ತಿಗೆ ಒಂದು ದಿನವಾದರೂ ಕೆಲಸಕ್ಕೆ ಬಂದವನಲ್ಲ. ನನ್ನ ಪ್ರೀತಿ, ಆದರ, ಸಲುಗೆಗಳಿಂದ ಅವನಿಗಿನ್ನೂ ಹೆಚ್ಚು ಅವಕಾಶ ಸಿಕ್ಕಂತಾಗಿತ್ತು. ಮೇಲಧಿಕಾರಿಗಳಿಗೆ ಬರೆದು ಅವರನ್ನು ಬೇರೇ ಕಡೆಗೆ ವರ್ಗಾಯಿಸಲು ತಿಳಿಸಿದೆ.

ಒಂದು ಶುಕ್ರವಾರ; ಮೊದಲನೆಯ ತಾರೀಖು ಆ ದಿನ ಪ್ರಾಂತಃಕಾಲ ರಾಜಪ್ಪನು ಬಂದು "ಸ್ವಾಮಿ ಸೋಮವಾರ ಪಗಾರ ತೆಗೆದುಕೊಂಡ ಕೂಡಲೇ ಕೊಡುತ್ತೇನೆ; ಒಂದು ಹತ್ತು ರೂಪಾಯಿ ಕೊಡಿ. ಅವಸರವಾಗಿದೆ ಗಂಡನ ಮನೆಗೆ ನನ್ನ ಮಗಳನ್ನು ಬಿಟ್ಟು ಬರಬೇಕಾಗಿದೆ'' ಎಂದ.

ಅವನ ಮಾತಿನಲ್ಲಿ ಅಂದು ಎಂದೂ ಇಲ್ಲದ ಬೇಡಿಕೆ ಇತ್ತು. ನನಗೆ ಅವನ ಕೆಲವು ಮೊದಲೇ ತೃಪ್ತಿಯಾಗಿರುತ್ತಿದ್ದಿಲ್ಲ. ನೇಲಾಗಿ ಆ ದಿನ ಡ್ಯೂಟೀಗೆ ತಡವಾಗಿ ಬೇರೆ ಬಂದಿದ್ದ. ಅದೇ ಕೋಪದಲ್ಲಿದ್ದ ನಾನು ಅವನ ಕೋರಿಕೆಯನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿ, ಅವನು ಅಂದು ತಡವಾಗಿ ಬಂದುದಕ್ಕಾಗಿ ಅವನನ್ನು ಚನ್ನಾಗಿ ಬೈದುಬಿಟ್ಟೆ. ನಿರಾಶೆಯಿಂದ ಅವನು ಕೆಲಸಕ್ಕೆ ಹೊರಟುಹೋದ.

ಆದರೆ ನನ್ನ ದಾಕ್ಷಿಣ್ಯವನ್ನು ಪರೀಕ್ಷೆಮಾಡಲೋಸುಗವೋ ಏನೋ ಎಂಬಂತೆ ರಾಜಪ್ಪನೊಂದಿಗೆ ಮಾತನಾಡಿ ಮುಗಿಸುವಷ್ಟರಲ್ಲಿ ಅಲ್ಲಿಯ ಫಾರೆಸ್ಟ್ ರೇಂಜರರಾದ ಮೂರ್ತಿರಾಯರು ಓಡಿಬಂದರು. ರಾಮಮೂರ್ತಿಯವರು ನಮ್ಮ ಮನೆ ಪಕ್ಕದಲ್ಲಿರುತ್ತಿದ್ದರು. ಎರಡು ಮೂರು ದಿನಗಳಿಂದ ಅವರು ಬಹಳ ನೊಂದವರಂತೆ ಕಾಣುತ್ತಿದ್ದರು. ಕಾರಣ ಕೇಳಿಕೊಂಡೆ.

ಹೆರಿಗೆಗಾಗಿ ಬಂದ ಅವರ ಹಿರಿಯ ಮಗಳು ಶ್ಯಾಮಲೆಯ ಪರಿಸ್ಥಿತಿ ಚಿಂತಾಜನಕವಾಗಿರುವುದೆಂದು ತಿಳಿಸುತ್ತ "ಶ್ರೀನಿವಾಸರಾವ್, ಬಹಳ ಅರ್ಜೆಂಟಾಗಿ ಟೌನಿಗೆ ಹೋಗಿ ಡಾಕ್ಟರರನ್ನು ಕರೆದುಕೊಂಡು ಬರಬೇಕು. ಹುಡುಗಿಯ ಸ್ಥಿತಿ ಬಹಳ ಸೂಕ್ಷ್ಮಕ್ಕೆ ಬಂದಿದೆ. ಹೇಗಾದರೂ ಮಾಡಿ ಒಂದು ಐವತ್ತು ರೂಪಾಯಿ ಕೊಡಬೇಕು. ನಾಳೆ ನನ್ನ ಭತ್ತದ ವಿಕ್ರಯವಾದೊಡನೆ ಕೊಡುತ್ತೇನೆ" ಎಂದು ಒಂದೇ ಉಸುರಿನಲ್ಲಿ ಕೇಳಿಕೊಂಡರು.

ಸ್ವಲ್ಪ ಕಾಲ ಯೋಚಿಸಿದೆ. "ನಾಳೆ ಅವರು ಹಣ ಕೊಡದೆಹೋದರೂ ಸೋಮವಾರ ಸಗಾರವು ಬಂದೇಬಿಡುವುದು. ಮಧ್ಯ ಇರುವುದು ಶನಿವಾರ ವೊಂದೇ ಸ್ಟೇಷನಿನ ಹಣದ ಚೀಲವನ್ನು ನಾಳೆ ತಾನೆ ಕಳುಹಿಸಬೇಕು "ನೋ ಕಲೆಕ್ಷನ್ಸ್ (N › Collections) ಎಂದು ಕಳುಹಿಸಿದರಾಯಿತು." ಎಂದು ತಿಜೋರಿಯನ್ನು ತೆಗೆದು ಅದರಲ್ಲಿಯ ಐದು ಹತ್ತು ರೂಪಾಯಿ ನೋಟುಗಳನ್ನು ತೆಗೆದು ರಾಮಮೂರ್ತಿಗೆ ಕೊಟ್ಟೆ ಶ್ಯಾಮಲೆಯ ಜೀವ ವನ್ನೇ ಕಾಪಾಡಿದೆನೆಂಬ ಹೆಮ್ಮೆ ನನ್ನಲ್ಲಿ ಆಗ ಉಂಟಾಗಿತ್ತು. ನಾನು ತಿಜೋರಿಗೆ ಕೀಲಿ ಹಾಕಿ, ತಿರುಗುವುದರಲ್ಲಿಯೇ ಅಲ್ಲಿಯೇ ನಿಂತಿದ್ದ ರಾಜಪ್ಪ ನನ್ನು ನೋಡಿದೆ ಅವನ ಮುಖದಲ್ಲಿ ಕೋಪ, ಅಸೂಯೆಗಳು ತುಂಬಿದ್ದು ವೆಂಬಂತೆ ನನಗೆ ಭಾಸವಾಯಿತು. ಅವನೂ ಮಾತನಾಡಲಿಲ್ಲ, ಲೈನ್ ಕ್ಲಿಯರ್ ತೆಗೆದು ಅವನ ಕೈಗಿತ್ತೆ ಗಾಡಿಯೂ ಬರುವ ಸಮಯವಾದ್ದರಿಂದ ಟಿಕೆಟ್ಟು ಕೊಡಲು ಕಿಟಕಿಗೆ ಬಂದೆ. ಗಾಡಿಯೂ ಬಂದು ನಿಂತಿತು.

"ತಾನೊಂದು ಬಗೆದರೆ ದೈವವೊಂದು ಬಗೆವಂತೆ, ಆ ಗಾಡಿಗೆ ಆಡಿಟ್ ಇನ್ಸಪೆಕ್ಟರ್ ಸುಬ್ಬರಾಯರು ಬಂದರು. ನನ್ನನ್ನು ಭಯಾಶ್ಚರ್ಯಗಳು ಏಕಕಾಲದಲ್ಲಿ ಆವರಿಸಿದವು. ಅವರು ಆ ದಿನ ಬರುವರೆಂದು ನಾನು ಕನಸಿ ನಲ್ಲಿ ಕೂಡ ತಿಳಿದಿದ್ದಿಲ್ಲ. ಅದೂ ಸ್ಟೇಷನ್ ಹಣದಲ್ಲಿ ಐವತ್ತು ರೂಪಾಯಿ ಗಳು ಕಡಿಮೆ ಇರುವಾಗ ಎಂದು ನೆನೆದಾಗ ನಡುಗಿ ಹೋದೆ.

ಸರಿ ರಾಜಪ್ಪನು ಆಗ ನಡೆದ ವಿಷಯವನ್ನೆಲ್ಲ ಇನ್ಸ್ಪೆಕ್ಟರರ ಹತ್ತಿರ ಹೇಳಿರಬಹುದೆಂದು ತಿಳಿದೆ. ನಾನು ಅವನಿಗೆ ಹಣ ಕೊಡಲಿಲ್ಲವಲ್ಲಾ ಎಂಬ ಕೋಪದಿಂದ ಗಾಡಿಯಲ್ಲಿ ಎಲ್ಲಿಗೋ ಹೋಗುತ್ತಿದ್ದ ಸುಬ್ಬರಾಯರನ್ನು ಇಲ್ಲಿಯೇ ಇಳಿಸಿ ತಂದಿರಬಹುದು. ಸುಬ್ಬರಾಯರು ಈಗ ಬಂದೊಡನೆ ಹಣದ ಅಕೌಂಟ ತನಿಖೆ ಮಾಡುವರು ಹಣ ಕಡಿಮೆ ಇರುವುದು ಗೊತ್ತಾಗಿ ರಿಪೋರ್ಟ ಮಾಡುವರು; ಅಂದಿಗೆ ರೈಲ್ವೆಯ ಋಣ ತೀರಿತೆಂದು ತಿಳಿದೆ. ಅದಲ್ಲದೇ ಸರಕಾರದ ಹಣ ಉಪಯೋಗಿಸಿಕೊಂಡುದಕ್ಕಾಗಿ ಶಿಕ್ಷೆ" ಕೃಷ್ಣ ಜನ್ಮಸ್ಥಾನ ಬೇರೆ ಉಂಟಲ್ಲ ಎಂದು ನನ್ನ ಮನಸ್ಸು ಬಹಳ ವ್ಯಥೆಗೊಂಡಿತು.

"ಬನ್ನಿ ಸಾರ್"

ಅಷ್ಟರಲ್ಲಿ ರಾಜಪ್ಪನು ತಂದಿದ್ದ ಲೈನ್ ಕ್ಲಿಯರನ್ನು ನನ್ನ ಕೈಗೆ ಕೊಡದೆ, ಇನ್ಸ್ಪೆಕ್ಟರವರಿಗೆ ಒಂದು ಕುರ್ಚಿ ಹಾಕಿದ. ಅವರ ಬೆನ್ನು ನನ್ನ ಟೇಬಲಿನ ಕಡೆ ಇರುವಂತೆ ಮಾಡಿದ. ಅದರರ್ಥ ನನಗಾಗ ಆಗಲಿಲ್ಲ.

"ಮಿಸ್ಟರ್ ಶ್ರೀನಿವಾಸರಾವ! ಈ ಸ್ಟೇಷನ್ನಿನ ಇನ್ಸ್‌ಪೆಕ್ಷನ್ ಬರುವ ತಿಂಗಳಲ್ಲಿ ಮಾಡಬೇಕೆಂದಿದ್ದೆ. ಆದರೆ ಕೆಲವು ಅನಿವಾರ್ಯ ಕಾರಣಗಳಿಂದ ಈಗಲೇ ಮಾಡಬೇಕಾಗಿ ಬಂದಿರುವುದು " ಅವರ ಈ ಮಾತುಗಳನ್ನು ಕೇಳಿ ನನ್ನ ಬಾಯಾರಿಹೋಯಿತು ಸರಿ. ರಾಜಪ್ಪನು ಸೇಡುತೀರಿಸಿಕೊಳ್ಳಲು ನಿರ್ಧರಿಸಿದ್ದಾನೆಂದು ತಿಳಿದೆ.

ಆಗ ರಾಜಪ್ಪನು ನನ್ನ ಹತ್ತಿರ ಬಂದು "ಸ್ವಾಮಿ ಕ್ಯಾಷ್ ಬ್ಯಾಗಿನ ಸೀಲ್ ಬರಲೊಲ್ಲದು ಚಾಕು ಕೊಡಿ" ಎಂದು ಹೇಳಿ ನನ್ನ ಉತ್ತರವನ್ನು ಸಹ ನಿರೀಕ್ಷಿಸದೇ ಚಾಕು ತೆಗೆದುಕೊಂಡು ನನ್ನ ತಿಜೋರಿಯ ಕೀಲಿ ಕೈಯನ್ನು ತೆಗೆದುಕೊಂಡು ಹೋದ. ನನ್ನ ಟೇಬಲಿನ ಬಳಿ ಸುಳಿಯಲು ಭಯಪಡುತ್ತಿದ್ದ ರಾಜಪ್ಪನು ಇಷ್ಟು ಧೈರ್ಯದಿಂದ ತಿಜೋರಿಯನ್ನು ತೆಗೆಯಲು ಹೋದುದು ಆಶ್ಚರ್ಯವಾಯಿತು ಇವನು ಇದನ್ನು ಇನ್ಸ್‌ಪೆಕ್ಟರರ ಕೈಯ್ಯಲ್ಲಿಟ್ಟು ನನ್ನ ತಪ್ಪನ್ನು ಮುಂದಿಡುತ್ತಾನೆ ಎಂದು ನಿರ್ಧರಿಸಿದೆ ನನ್ನ ಹೃದಯದಲ್ಲಿ ಸಿಡಿಲು ಬಿದ್ದಂತಾಯಿತು. ಆದರೆ ಆಗ ಅವನು ನನ್ನ ಕಾಲನ್ನು ಒತ್ತಿ ಸುಮ್ಮನಿರುವಂತೆ ಸಂಜ್ಞೆಮಾಡಿದ ಅವನು ಇನ್ಸ್‌ಪೆಕ್ಟರನ್ನು ನೋಡಿ, "ಅಯ್ಯಾ ಮಾಸ್ತರರು ಸ್ನಾನ ಮಾಡುವಾಗ ಕೀಲಿ ಕೈ ಅಲ್ಲಿಯೇ ಮರೆತು ಬಂದಿದ್ದಾರೆ. ಅದನ್ನು ತೆಗೆದುಕೊಂಡು ಹಾಗೆಯೇ ನಿಮಗೇನಾದರೂ ನಾಷ್ಟಾ ತೆಗೆದುಕೊಂಡು ಬರುತ್ತೇನೆ" ಎಂದು ಹೇಳಿ ಅವರ ಉತ್ತರವನ್ನು ಸಹ ನಿರೀಕ್ಷಿಸದೇ ಹೊರಟುಹೋದ ಸುಬ್ಬರಾಯರು ನನ್ನ ಕಡೆ ತಿರುಗಿ "ಏನು ಶ್ರೀನಿವಾಸರಾವ್ ಬಹಳ ಅಜಾಗ್ರತೆಯಿಂದ ಇರುತ್ತೀರೆಂದು ಕಾಣುತ್ತದೆ. ತಿಜೋರಿ ಕೀಲಿ ಕೈ ಹೀಗೆ ಮರೆತರೆ ಏನು ಗತಿ? ನಾನು ಕ್ಯಾಷ್ ಚೆಕ್ ಮಾಡೋಣವೆಂದು ಬಂದರೆ?" ಎಂದು ಹೇಳಿ ಕೈಯಲ್ಲಿಯ ಪತ್ರಿಕೆಯನ್ನು ತಿರುವಿಹಾಕಲಾರಂಭಿಸಿದರು. ನನಗೇನೂ ಅರ್ಥವಾಗಲಿಲ್ಲ ನಿದ್ದೆಯಲ್ಲಿ ನಡೆಯುವವನಂತಿದ್ದೆ.

ಮತ್ತೆ ಬರಲಿದ್ದ ಗಾಡಿಗೆ ಟಿಕೆಟ್ಟುಗಳನ್ನು ಕೊಟ್ಟು ಲೈನ್ ಕ್ಲಿಯರ್ ತೆಗೆದುಕೊಂಡೆ. ವಿಷಯ ತಿಳಿಯದೇ ರಾಜಪ್ಪನ ಬಲೆಯಲ್ಲಿ ಸಿಕ್ಕಿಬಿದ್ದೆನಲ್ಲಾ? ಸುಬ್ಬರಾಯರೊಂದಿಗೆ ನಡೆದ ಸಮಾಚಾರವೆಲ್ಲ ಹೇಳಿಬಿಡಲೇ? ಅವರೂ ದಯಾರ್ದ್ರ ಹೃದಯರೇ. ಆದರೂ ಈಗ ಹೇಗಿರುವರೋ ಯಾರು ಬಲ್ಲರು?

ಗಾಡಿ ಬರುವಷ್ಟರಲ್ಲಿ ರಾಜಪ್ಪನೂ ಹಿಂತಿರುಗಿದ. "ರಾಜಪ್ಪ ಈ ಗಾಡಿಯಲ್ಲಿ ಹಿಂದೆ ಹೋಗಿಬಿಡುತ್ತೇನೆ" ಎಂದು ಸುಬ್ಬರಾಯರು ಎದ್ದರು. "ಅ, ಇಲ್ಲ ಮಾಸ್ತರರೇ, ಕೀಲಿ ಕೈ ಸಿಕ್ಕಿತು. ಇನ್ಸ್‌ಪೆಕ್ಷನ್ ಮಾಡ್ರಲ್ಲ?" ಎಂದು ಕೀಲಿ ಕೈ ಡ್ರಾಯರಿನಲ್ಲಿ ಹಾಕಿದ. ಆಗ ಅಲ್ಲಿಯೇ ನೋಡುತ್ತಿದ್ದ ನಾನು ನನ್ನ ಕಣ್ಣನ್ನೇ ನಂಬಲಾರದೇ ಹೋದೆ ಕೈಯಲ್ಲಿ ಮುದುರಿ ಬೆವರಿಗೆ ನೆನೆದು ಒದ್ದೆಯಾಗಿದ್ದ ಐದು ಹತ್ತು ರೂಪಾಯಿನ ನೋಟುಗಳೂ ಇದ್ದುವು ಆಗ ರಾಜಪ್ಪನ ಯೋಚನೆ ತಿಳಿಯಿತು ಕೀಲಿ ಕೈ ಹುಡುಕಿ ತರಲು ಅವಕಾಶಬೇಕೆಂಬ ನೆವದಿಂದ ಅವನು ಎಲ್ಲಿಯೋ ಹೋಗಿ ನನ್ನ ನೌಕರಿ ಉಳಿಸಲು ರೂಪಾಯಿಗಳನ್ನು ಕೂಡಿಸಿಕೊಂಡು ಬಂದಿರುವನು. ಆ ಕ್ಷಣ ಅವನು ನನ್ನ ಅಧಿದೇವತೆಯಂತೆ ನನಗೆ ಕಂಡು ಬಂದ. ಅವನ ಬಗ್ಗೆ ಕೊಂಚ ಸಮಯದ ಹಿಂದೆ ನಾನು ತಪ್ಪಾಗಿ ತಿಳಿದುದಕ್ಕೆ ನನ್ನನ್ನು ನಾನೇ ಹಳಿದುಕೊಂಡೆ

ತೃಪ್ತಿಕರವಾಗಿ ಇನ್ಸ್‌ಪೆಕ್ಷನ್ ಮುಗಿಸಿಕೊಂಡು ಆ ದಿನ ಸಂಜೆ ಗಾಡಿಗೆ ಸುಬ್ಬರಾಯರು ಹೋದರು. ಅವರನ್ನು ಗಾಡಿಯಲ್ಲಿ ಬಿಟ್ಟು ರಾಜಪ್ಪನು ಬಂದೊಡನೆ ಅವನನ್ನಪ್ಪಿದೆ "ರಾಜಪ್ಪ ನಿನ್ನನ್ನು ಬಹಳ ಹಳಿದೆ. ಅವಶ್ಯವಾಗಿ ಸಹಾಯ ಮಾಡಬೇಕಾದಾಗ ನಾನು ಹಿಂಜರಿದೆ. ಅವೆಲ್ಲವನ್ನೂ ನೋಡದೇ ನೀನು ನನ್ನ ನೌಕರಿ ಉಳಿಸಿದೆ. ನೀನು ಮುಂದಾಲೋಚನೆ ಮಾಡದೇ ನಿಸ್ಸಹಾಯಕನಾಗಿದ್ದಿದ್ದರೆ, ಈ ದಿನ ನನ್ನ ನೌಕರಿ ಹೋಗಿ ನಾನು ಜೈಲನ್ನೂ ಕಾಣುವ ಪ್ರಸಂಗ ಬರುತ್ತಿತ್ತು. ನೀನೇ ನನ್ನ ದಾರಿ ತೋರಿದ ದೈವ.''

"ಸ್ವಾಮಿ ಕಷ್ಟದಲ್ಲಿ ಸಹಾಯ ಮಾಡದೇ ಇದ್ದರೆ ಮನುಷ್ಯ ಇದ್ದರೇನು ಸತ್ತರೇನು? ಸರ್ಕಾರದ ಹಣ ನೀವು ನಿಮ್ಮ ಸ್ವಾರ್ಥಕ್ಕೆ ಉಪಯೋಗಿಸಿಲ್ಲ. ನೀವೂ ಕಷ್ಟದಲ್ಲಿದ್ದ ಒಬ್ಬರಿಗೆ ಸಹಾಯ ಮಾಡಿರುವಿರಿ. ತಪ್ಪೆ! ಆದರೂ ಸ್ವಲ್ಪ ಹೊತ್ತು ಶಿಕ್ಷೆ ಅನುಭವಿಸಿದಿರಿ. ನಿಮ್ಮ ಮನೋವೇದನೆಯೇ ನಿಮಗೆ ಶಿಕ್ಷೆಯಾಗಿತ್ತು. ಆದಕ್ಕಾಗಿಯಲ್ಲವೇ ದೇವರು ನನಗೀ ಆ ಲೋಚನೆ ತಂದದ್ದು. ಕೀಲಿ ಕೈ ತೆಗೆದುಕೊಳ್ಳುವ ನೆವದಲ್ಲಿ ಮಗಳ ಬಳೆಗಳನ್ನು ಅಡವಿಟ್ಟು ರೂಪಾಯಿಗಳನ್ನು ತಂದೆ. ರಾಯರು ಗಾಡಿಯಿಂದಿಳಿದಿದ್ದನ್ನು ನೋಡಿದೊಡನೆಯೇ ನನಗೆ ಈ ಯೋಚನೆ ಹೊಳೆಯಿತು'' ಎಂದ.

ಆ ದಿನ ರಾಜಪ್ಪನು ಮಾತ್ರ ಸಹಾಯ ಮಾಡದೇ ಹೋಗಿದ್ದರೆ ಇಂದು ನಾನೊಬ್ಬ ಖೈದಿಯಾಗಿ ಜೈಲಿನ ಸಲಾಕೆಗಳನ್ನು ಎಣಿಸುತ್ತ ಇರಬೇಕಾಗುತ್ತಿತ್ತು. ಆದ್ದರಿಂದ ನನ್ನ ದೃಷ್ಟಿಯಲ್ಲಿ ಅವನೊಬ್ಬ ದೈವವೇ ಸರಿ. ನಾನಿರುವವರೆಗೂ ಅವನಿಗೆ ನನ್ನ ಋಣ ತೀರಿಸಲೋಸುಗವೇ ಅವನನ್ನು ನನ್ನ ಹಿಂದೆಯೇ ಕರೆದುಕೊಂಡು ಬಂದಿದ್ದೇನೆ. ಅಷ್ಟು ಕಷ್ಟಗಳಿಗೊಳಗಾಗಿಯಾದರೂ ಅವನನ್ನು ನನ್ನೊಂದಿಗೆ ಬದಲೀ ಮಾಡಿಸಿಕೊಳ್ಳುತ್ತೇನೆ. ಇದಕ್ಕೆ ನಿನ್ನ ಅಭ್ಯಂತರವೇನಾದರೂ ಇದ್ದರೆ ಅದು ನಿನ್ನ ಹೊಟ್ಟೆಗೆ ಇರಲಿ. ನಾನು ಅವನನ್ನು ದೈವವೆಂದೇ ನೋಡುತ್ತಲಿರುವೆನು. ನೋಡುವೆನು–ನೋಡದೆ ಇರಲಾರೆನು

ಲೀಲಾ ಕಣ್ಣೀರನ್ನೊರೆಸಿಕೊಂಡು "ನನ್ನನ್ನು ಕ್ಷಮಿಸಿ. ರಾಜಪ್ಪನು ನಮ್ಮ ಕುಲಜ್ಯೋತಿಯನ್ನು ಬೆಳಗಿಸಿದ ಮಹಾತ್ಮ. ನಿಮಗವನು ದೈವವೆಂದ ಮೇಲೆ ನನಗೂ ದೈವವೇ." ಎಂದು ತತ್ತರಿಸುತ್ತಲಿರುವ ಧ್ವನಿಯಲ್ಲಿ ಮರು ನುಡಿದಳು.

---



# ಇಂದುಮತಿ



ಅಂದು ಭಾನುವಾರ. ಮಧ್ಯಾಹ್ನ ಸಿನೀಮಾಕ್ಕೆ ಹೋಗೋಣವೆಂದು ಹೇಳಿದ ಅವರು ಚಕ್ಕರ ಕೊಟ್ಟೇ ಬಿಟ್ಟಿದ್ದರು; ಸಿನೀಮಾಕ್ಕೆ ಹೋಗುವ ಉತ್ಸಾಹದಲ್ಲಿ ಮನೆಗೆಲಸವನ್ನೆಲ್ಲ ಬೇಗ ಬೇಗ ಮುಗಿಸಿ ದಾರಿ ಕಾಯುತ್ತ ಕುಳಿತಿದ್ದೆ. ಆದರಿಂದ ಬೇಸರ ಬಂದು ಏನೂ ಮಾಡಲೂ ತೋಚದಂತಾಯಿತು. ಸಿನೀಮಾದ ವೇಳೆ ಮೀರಿ ಹೋದದ್ದನ್ನು ಬಗೆದು ಸುಮ್ಮನೆ ಮನೆಯಲ್ಲೇ ಅತ್ತಿತ್ತ ಅಲೆದಾಡಿದೆ. ಅವರ ಪೆಟ್ಟಿಗೆಯು ಅಸ್ತವ್ಯಸ್ತವಾದಂತೆ ಕಂಡುಬಂತು. ಅದನ್ನು ಸರಿಯಾಗಿ ಹೊಂದಿಸಿಡಬೇಕೆಂದೆಣಿಸಿ, ಅದನ್ನು ಹೊರತೆಗೆದು, ಅದರಲ್ಲಿ ಅಡಗಿದ್ದ ಧೂಳು ಹೊರಗೆಡವಲು ಪೆಟ್ಟಿಗೆಯನ್ನು ತಲೆಕೆಳಗೆ ಮಾಡಿದೆ. ಆ ಪೆಟ್ಟಿಗೆಯ ರಹಸ್ಯವಾದ, ಖಾನೆಯಿಂದ ಒಂದು ಕಟ್ಟು ಕಾಗದಗಳು ಹೊರಬಿದ್ದವು; ನಾನು ಅಚ್ಚರಿಗೊಂಡೆ. ಅದನ್ನು ಬಿಚ್ಚಿ ಕಾಗದಗಳನ್ನು ಓದೋಣವೇ ಬೇಡವೇ ಎಂದು ಒಂದು ಕ್ಷಣ ಯೋಚಿಸಿದೆ. ನೋಡಿ ಮತ್ತೆ ಯಥಾಪ್ರಕಾರವಾಗಿ ಇಟ್ಟುಬಿಟ್ಟರೇನಾಗುವುದೆಂದು ತಿಳಿದು ಅದಕ್ಕೆ ಕಟ್ಟಿದ್ದ ರೇಷ್ಮೆಯ ದಾರವನ್ನು ಬಿಚ್ಚಿದೆ. ಕಾಗದಗಳ ಮಧ್ಯದಿಂದ ಒಂದು ಚಿತ್ರವೂ ಕೆಳಗೆ ಬಿತ್ತು.

ಬಹಳ ಸುಂದರ ಮುಖವುಳ್ಳ ಓರ್ವ ತರುಣಿಯ ಚಿತ್ರವನ್ನು ತನ್ನ ಗಂಡನ ಪೆಟ್ಟಿಗೆಯಲ್ಲಿ ಗುಪ್ತವಾಗಿರಿಸಿದ್ದನ್ನು ನೋಡಿದ ಒಬ್ಬ ಮಡದಿಯ ಮನಸ್ಸು ಹೇಗಿರಬಹುದೆಂದು ನೀವೇ ಊಹಿಸಿಕೊಳ್ಳಿ! ಆ ಚಿತ್ರದಲ್ಲಿಯ ಹೆಣ್ಣಿನ ವಯಸ್ಸು ಸುಮಾರು ಹದಿನಾರು ಇರಬಹುದು ಅವಳು ಅತ್ಯಂತ ರೂಪಸಿ. ಆದೇ ಅರಳಿದ ಗುಲಾಬಿಯಂತಿತ್ತು ಅವಳ ಮುಖ. ಆ ಚೆಲ್ವಿಕೆಗೆ ಒಂದು ಕ್ಷಣ ನಾನು ಸಹ ಮುಗ್ಧಳಾದೆ ಆದರೆ ನನ್ನ ಸ್ತ್ರೀ-ಸಹಜ ಸ್ವಭಾವ ತಡೆಯಲಿಲ್ಲ ತಟ್ಟನೆ ಆ ಫೋಟೋದೊಂದಿಗೆ ಇದ್ದ ಪತ್ರಗಳು ಜ್ಞಾಪಕಕ್ಕೆ ಬಂದುವು; ರಹಸ್ಯವನ್ನು ತಿಳಿಯುವ ದೃಷ್ಟಿಯಿಂದ ಒಂದೊಂದಾಗಿ ಅವುಗಳನ್ನು ತೆಗೆದು ನೋಡತೊಡಗಿದೆ.

ಪತ್ರಗಳು ಎಂಟು ವರುಷಗಳ ಹಿಂದೆ ಬರೆಯಲ್ಪಟ್ಟಂತೆ ಆ ಕಾಗದಗಳಲ್ಲಿದ್ದ ದಿನಾಂಕಗಳಿಂದ ತಿಳಿಯಿತು. ಪ್ರತಿಯೊಂದು ಪತ್ರದಲ್ಲಿಯೂ ಪ್ರೇಮ

ಪೂರಿತವಾದ ಶಬ್ದಗಳನ್ನು ಆ ಸುಂದರಿ ತುಂಬಿದ್ದಳು. ಅಂತಹ ರೂಪವತಿಯ ಪ್ರೇಮಪಾತ್ರನಾದ ನನ್ನ ಪತಿಗೆ ನಾನು ಕುರೂಪಿಯ ಹಾಗೇ ಕಾಣಿಸುತ್ತಿರಬಹುದಲ್ಲವೇ ಎಂದೆನಿಸಿತು ನಾನೇನು ಕುರೂಪಿಯಲ್ಲವಾದರೂ ಅಂತಹ ಚೆಲುವಿಯಾದ ಆ ಸುಂದರಿಯ ಮುಂದೆ, ನಾನೂ ನನ್ನ ಸೌಂದರ್ಯವೂ ಲಜ್ಜೆಯಿಂದ ತಲೆಬಾಗಬೇಕಾಗಿತ್ತು. ಹೀಗೆ ನಾನು ಮನಮೆಚ್ಚಿಕೆಯಿಂದ ಅಂದುಕೊಳ್ಳುತ್ತಿರುವಾಗಲೇ ನನಗೆ ತಿಳಿಯದೇ, ನನ್ನ ಮನಸ್ಸಿನಲ್ಲಿ ಆ ಅಪ್ಸರೆಯ ಮೇಲೆ ಮತ್ಸರವುಂಟಾಯಿತು. ಆದರೂ ಕಣ್ಣೆತ್ತಲಾಗಲಿಲ್ಲ. ಹಾಗೆಯೇ ಆಲೋಚನಾ ಪ್ರಪಂಚದಲ್ಲಿ ಮುಳುಗಿಬಿಟ್ಟೆ. ನನಗೆ ಎಚ್ಚರವಾದುದು "ಶಾಂತಾ ಏನಿದೂ!" ಎಂದು ನನ್ನವರ ಆವೇಶಪೂರಿತವಾದ ಕೂಗು ಕೇಳಿಸಿದಾಗಲೇ. ಕಣ್ಣುಗಳಲ್ಲಿ ಕೋಪದ ಕಿಡಿಗಳು ಕಾರುತ್ತಿರಲು ಅವರು ನನ್ನನ್ನೇ ನೋಡುತ್ತ ನನ್ನ ಬೆನ್ನ ಹಿಂದೆಯೇ ಬಂದು ನಿಂತಿದ್ದರು. ನನ್ನ ಅವರ ಪರಿಣಯವಾದ ನಂತರ ಒಂದು ದಿನವೂ ಅವರ ಕೋಪವನ್ನರಿಯದ ನಾನು ಈ ರೀತಿಯಲ್ಲಿ ಅವರನ್ನು ನೋಡಿದೊಡನೆಯೇ ಗಾಬರಿಗೊಂಡೆ.

"ಶಾಂತಾ, ನೀನು ಕಲಿತ ಹುಡುಗಿ, ಹೀಗೆ ಇತರರ ರಹಸ್ಯಗಳನ್ನರಿಯಲು ಯತ್ನಿಸುವುದು, ನಿನ್ನ ವಿದ್ಯೆಗೆ ತಕ್ಕುದಲ್ಲ. ನಿನಗೆ ನಾಚಿಕೆಯಾಗುವುದಲ್ಲವೇ?'' ಎಂದು ಅಬ್ಬರಿಸಿ ಮಾತನಾಡಿದರು.

ನಾನು ಗಾಬರಿಯಾದೆ. ಅವರು ಹೇಳುವುದೂ ನಿಜವೇ ಅವರ ಪೆಟ್ಟಿಗೆಯನ್ನು ತೆಗೆದುದು ತಪ್ಪು ಆದ್ದರಿಂದ ಏನು ಉತ್ತರ ಕೊಡಬೇಕೆಂದು ಸರಿಯಾಗಿ ತಿಳಿಯದೇ— "ನಾನು ಬೇಕೆಂದು ಇವುಗಳನ್ನು ತೆಗೆದು ನೋಡಲಿಲ್ಲ. ನಿಮ್ಮ ಪೆಟ್ಟಿಗೆಯನ್ನು ಸ್ವಚ್ಛ ಮಾಡುವಾಗ ಇವೆಲ್ಲ ಕೆಳಗೆ ಬಿದ್ದವು." ಎಂದು ಸುಮ್ಮನಾದೆ.

"ಚೆನ್ನಾಗಿದೆ, ನೀನು ಹೇಳುವ ಕಾರಣ" ಎಂದು ಕೋಪದಿಂದ ಆ ಕೆಳಗೆ ಬಿದ್ದಿದ್ದ ಕಾಗದಗಳನ್ನೆಲ್ಲ ತೆಗೆದಿಡಲಾರಂಭಿಸಿದರು.

ಮಾತನಾಡದೆ ನಾನು ಅಡುಗೆಯ ಮನೆಗೆ ಹೊರಟುಹೋದೆ. ಅವರು ನಾನು ಮಾಡಿದ್ದು ತಪ್ಪೆಂದರಲ್ಲವೇ? ಆದರೆ ಓರ್ವ ಹೆಣ್ಣಿನ ಚಿತ್ರ, ಪತ್ರಗಳನ್ನು ವಿವಾಹಿತ ತರುಣನು ತನ್ನಲ್ಲಿಟ್ಟುಕೊಂಡಿರುವುದು ಮಾತ್ರ ಸರಿಯೇ? ನನ್ನ ಮನಸ್ಸು ಇನ್ನೂ ಏನೇನೋ ಯೋಚನೆಗೊಳಗಾಯಿತು. ನನ್ನ ಭವಿಷ್ಯ ನನ್ನ ಕಣ್ಣೆದುರಿಗೆ ಬಂದಂತಾಯಿತು. ಆದರೆ, ಕಾಫಿ ತೆಗೆದುಕೊಂಡು ಅವರ ಕೋಣೆಗೆ ಹೋದಾಗ ನನಗೆ ಅಲ್ಲಿಯ ದೃಶ್ಯವನ್ನು ನೋಡಿ ಮನಕರಗಿತು.

ಕೈಯಲ್ಲಿದ್ದ ಕಾಫಿಯನ್ನು ಮೇಜಿನ ಮೇಲಿಟ್ಟು ಅವರ ಹತ್ತಿರ ಹೋಗಿ "ನಾನು ಮಾಡಿದ್ದು ತಪ್ಪು; ನನ್ನನ್ನು ಕ್ಷಮಿಸಿ" ಎಂದು ಬೇಡಿದೆ

"ನಿನ್ನದೇನೂ ತಪ್ಪಿಲ್ಲ ಶಾಂತಾ, ನಿಗೂಢ ರಹಸ್ಯವನ್ನು–ಅದಾವುದೋ ಆಗಲಿ-ತಿಳಿಯಬೇಕೆಂಬ ಆತುರ ಮನುಷ್ಯನ ನೈಜ ಗುಣಗಳಲ್ಲೊಂದು. ನಿನ್ನಿಂದ ಈ ವಿಷಯ ಬಚ್ಚಿಟ್ಟಿದ್ದು ನನ್ನದೇ ತಪ್ಪು. ಆದರೆ ನಾನು ಹಾಗೆ ಮಾಡಿದ್ದು ನಿನ್ನನ್ನು ವಂಚಿಸುವ ಉದ್ದೇಶದಿಂದಲ್ಲ ಅದರಿಂದ ನನ್ನ ಹಿಂದಿನ ದಿನದ ನೆನಪುಗಳು ಮರುಕಳಿಸಿ ಆಗುವ ವೇದನೆಗೆ ಹೆದರಿ. ಈಗ ನನ್ನ ಮನಸ್ಸಿನಲ್ಲಿ ಆಗುತ್ತಿರುವ ವಿಪ್ಲವವನ್ನು ನೀನರಿಯಲಾರಿ. ನೀನು ಚಿತ್ರ ಮತ್ತು ಪತ್ರಗಳನ್ನು ಹೊರತೆಗೆದು ನನ್ನ ಮನದಾಳದಲ್ಲಿ ಅಡಗಿದ್ದ ಆರು ವರುಷಗಳ ಹಿಂದೆ ಆಗಿ ಹೋದ ಅನುಭವವನ್ನು ಮತ್ತೆ ಕೆದಕಿದೆ. ಅದರಿಂದ ದುಃಖವಾಯ್ತು. ಆ ದುಃಖ ನಿನ್ನೆದುರು ಕೋಪದ ರೂಪ ತಾಳಿತು; ಅಷ್ಟೆ" ಎಂದು ಹೇಳಿದರು; ಅವರ ಕಣ್ಣಲ್ಲಿ ಕಂಡೂ ಕಾಣದಂತಿದ್ದ ಕಣ್ಣಹನಿಗಳು ಒಂದು ಗತಕಾಲದ ಗುರುತಿನಂತಿದ್ದವು. ನನ್ನ ಸ್ತ್ರೀ-ಸಹಜಸ್ವಭಾವ ಆಗ ಹೇಸಿಕೊಂಡಿತು

* * *

"......ಆಗ ನಾನು ಮದರಾಸಿನ ಕಾಲೇಜಿನಲ್ಲಿ ಓದುತ್ತಲಿದ್ದೆ. ಬೇಸಿಗೆಯ ರಜೆಯಾದ ನಂತರ ಕಾಲೇಜ ಅದೇ ತೆರೆದಿತ್ತು. ನನ್ನ ಆನರ್ಸ್ ಕೊನೆಯ ವರುಷ. ನನ್ನ ತಂದೆಯವರಿಗೆ ಪೋಲೀಸ ಖಾತೆಯಲ್ಲಿ ಕೆಲಸ ವಿದ್ದುದರಿಂದ ಅವರು ಯಾವಾಗಲೂ ಫಿರ್ತಿ ಹೋಗುತ್ತಲಿದ್ದರು. ಆದ ಕಾರಣ ನಾನು ಹಾಸ್ಟೇಲಿನಲ್ಲಿಯೇ ಇರುತ್ತಲಿದ್ದೆ."

ಆ ದಿನ ರವಿವಾರ. ಸಂಜೆ ಐದು ಗಂಟೆಯಾಗಿರಬಹುದು. ನನ್ನ ಸ್ನೇಹಿತ ಗೋಪಾಲ ಬಂದು "ಏನೋ ರಾಜು, ವಿರಾಮವೂ ಇಲ್ಲದೇ ಪುಸ್ತಕ ಹಿಡಿದುಕೊಂಡು ಕುಳಿತಿದ್ದೀಯಲ್ಲಾ, ರವಿವಾರ ಸೂಟಿ ಕೊಟ್ಟಿರುವುದು ವಿಶ್ರಾಂತಿಗಾಗಿ, ತಿಳಿಯಿತೇ. ಅದೂ ಸಂಜೆ ಈ ಪರಿ ಕೋಣೆಯಲ್ಲಿ ಕುಳಿತು ಓದಿದರೆ ಮೈ ಏನಾಗಬೇಕು. ಎದ್ದು ಪುಸ್ತಕ ತೆಗೆದಿಟ್ಟು ಬಾ. ಈ ದಿನ ರಸಿಕರಂಜನೀ–ಸಭೆಯಲ್ಲಿ ಕುಮಾರಿ ಇಂದುಮತಿಯ ನಾಟ್ಯವಿದೆ. ಹೋಗೋಣ ನಡೆ" ಎಂದ.



"ನಾನು ಚಿಕ್ಕವನಾಗಿದ್ದಾಗಿನಿಂದಲೂ ಸಂಗೀತ, ನಾಟಕ, ನಾಟ್ಯ ಕಾರ್ಯಕ್ರಮಗಳಿಗೆ ಹೋಗುತ್ತಿದ್ದುದು ಅಪರೂಪ. ಅದೂ ಯಾರಾದರೂ

ಬಹಳ ಬಲವಂತ ಪಡಿಸಿದಾಗ ಮಾತ್ರ ನಾನು ಬರುವುದಿಲ್ಲವೆಂಬುದನ್ನು ತಿಳಿದ ಗೋಪಾಲನು ನನ್ನ ಕೈಯಲ್ಲಿದ್ದ ಪುಸ್ತಕವನ್ನು ಕಿತ್ತು ಬಿಸುಟು ನನ್ನ ನ್ನೆಳೆದುಕೊಂಡು ಹೊರಟೇಹೋದ."

''ಬಹಳ ಜನ ಜಂಗುಳಿ ಆದರೂ ಗೋಪಾಲನು ಪೂರ್ವ ವ್ಯವಸ್ಥೆ ಮಾಡಿದ್ದರಿಂದ ನಮಗೆ ಅನುಕೂಲವಾದ ಸ್ಥಳವೇ ದೊರಕಿತು. ಕಾರ್ಯ ಕ್ರಮ ಆರಂಭವಾಗಿ ಇಂದುಮತಿ ರಂಗದ ಮೇಲೆ ಬಂದಳು. ಅವಳು ನೋಡಲು ಸುಂದರಳು ಸ್ಫುರದ್ರೂಪಿ. ಮೊದಲಿಗೆ ಹೇಗೋ ನೋಡುತ್ತ ಲಿದ್ದ ನಾನು ಬರಬರುತ್ತಾ ಅವಳಲ್ಲಿಯೇ ತಲ್ಲೀನನಾದೆ. ಅಹಹ! ಎಂತಹ ನೃತ್ಯ ನಿಜವಾಗಿಯೂ ನೃತ್ಯ ದೇವತೆಯೇ ಬಂದು ನಿಂತಂತಿತ್ತು ನನ್ನ ಕಣ್ಣೆದುರು!

ಅಂದಿನಿಂದ ಅವಳ ಪ್ರತಿಯೊಂದು ಕಾರ್ಯಕ್ರಮವನ್ನು ಬಿಡದೇ ನೋಡುತ್ತಲಿದ್ದೆ. ಅವಳೊಡನೆ ಮಾತನಾಡಬೇಕೆಂದು ನನ್ನ ಮನಸ್ಸು ಪರಿ ತಪಿಸಲಾರಂಭಿಸಿದೆ. ಆದಕ್ಕಾಗಿ ನನ್ನ ಸ್ನೇಹಿತ ಗೋಪಾಲನೊಂದಿಗೆ ಯೋಚಿಸಿದಾಗ ಅವನು 'ನೀನೇಕೋ ಹೀಗೆ ಕೊರಗುತ್ತಿರುವಿ. ಇದಕ್ಕೆ ಹಾದಿ ನನಗೆ ಗೊತ್ತು ನಮ್ಮೊಂದಿಗೆ ಓದುತ್ತಿದ್ದನಲ್ಲಾ ಸುಕುಮಾರ ಅವನೇ ಇಂದುಮತಿಯ ಸಹೋದರ. ಅವನ ಮೂಲಕ ಇಂದುಮತಿಯ ಪರಿಚಯ ಮಾಡಿಸಿಕೊಡುತ್ತೇನೆ. ಮುಂದೆ ಪ್ರಯತ್ನ ನಿನ್ನದು, ಅದೃಷ್ಟ ನಿನ್ನದು ಆಯಿತಷ್ಟೇ' ಎಂದು ಧೈರ್ಯ ಹೇಳಿದ.

"ಸುಕುಮಾರ! ಇಂದುಮತಿಯ ಸಹೋದರ! ಅದು ಹೇಗೋ?" ನಾನು ಆಶ್ಚರ್ಯದಿಂದ ಕೇಳಿದೆ.

''ನೀನು ಕೇಳುವುದು ನ್ಯಾಯವೇ. ಇಂದುಮತಿಯ ತಾಯಿ ದೇವ ದಾಸಿ ಕುಲದಲ್ಲಿ ಹುಟ್ಟಿದವಳು. ತನ್ನ ಕುಲದ ಕಸುಬನ್ನು ಅನುಸರಿಸದೇ, ಸುಕುಮಾರನ ತಾಯಿ ಕಾಲವಾದೊಡನೆ, ಅವನ ತಂದೆಯನ್ನು ರಿಜಿಸ್ಟರು ಮದುವೆ ಮಾಡಿಕೊಂಡು ಸುಖವಾಗಿ ಸಂಸಾರಸೌಖ್ಯವನ್ನು ಅನುಭವಿಸುತ್ತ ಲಿರುವಳು. ಸುಕುಮಾರ, ಅವನ ತಂದೆ. ಇಂದುಮತಿ, ಅವಳ ತಾಯಿ, ಎಲ್ಲರೂ ಒಂದಾಗಿ ಕಂಟೋನಮೆಂಟಿನಲ್ಲಿರುವ ಒಂದು ದೊಡ್ಡ ಬಂಗಲೆಯಲ್ಲಿ ದ್ದಾರೆ ಮನೆಯಲ್ಲಿ ಶಿಕ್ಷಕರನ್ನಿಟ್ಟು ಇಂದುಮತಿಗೆ ನಾಟ್ಯವಿದ್ಯಾಭ್ಯಾಸ ಮಾಡಿಸುತ್ತಲಿದ್ದಾರೆ." ಎಂದು ವಿವರವಾಗಿ ಹೇಳಿ ಮುಗಿಸಿದ ಗೋಪಾಲ.

ಅವನು ಹೇಳಿದ ಒಂದೊಂದು ಮಾತೂ ನನ್ನ ಹೃದಯದಲ್ಲಿ ಜೇನು ಸವಿಸಿದಂತಿದ್ದವು. ನನ್ನನ್ನರಿಯದೇ ನನ್ನಲ್ಲಿಯು ಒಂದು ಆಶಾಲತೆ 'ನಾನೇ ಇಂದುವಿನ ಪ್ರಿಯತಮನಾಗಬಾರದೇಕೆ' ಎಂಗು ಹೇಳಿತು.

ಸುಕುಮಾರನ ಗೆಳೆತನದಿಂದ ನನಗೆ ಇಂದುಮತಿಯ ಪರಿಚಯವು ಚೆನ್ನಾಗಿ ಆಯ್ತು. ಪ್ರತಿ ಸಂಜೆ ಅವಳ ಮನೆಗೆ ಹೋಗುತ್ತಿದ್ದೆ ಪರಿಚಯವು ಪ್ರೇಮಕ್ಕೆ ಎಡೆಗೊಟ್ಟಿತು. ಅವಳ ಮಾತುಗಳೂ, ನೋಟವೂ ನನ್ನನ್ನು ಮೈಮರೆಯುವಂತೆ ಮಾಡುತ್ತಿದ್ದವು. ನನ್ನ ಕುಟುಂಬದ ಬಗ್ಗೆ ತಿಳಿದುಕೊಂಡ ಅವಳ ತಾಯಿಯು, ಯಾವ ಆಕ್ಷೇಪವನ್ನೂ ಎತ್ತಲಿಲ್ಲ. ಪ್ರೇಮದ ನಂದನ ವನದಲ್ಲಿ ನಾವೀರ್ವರೂ ಕೈಗೂಡಿಸಿ ನಲಿದಾಡಿದೆವು. ನನ್ನ ತಂದೆ ತಾಯಿ ಗಳ ಅನುಮತಿಯಿಂದ ನಾನವಳನ್ನು ಮದುವೆಯಾಗುವೆನೆಂದು ನಿಶ್ಚಿತವಾಗಿ ಹೇಳಿ ಅವಳ ತಾಯಿಯನ್ನೂ ಒಪ್ಪಿಸಿದೆ ಪರೀಕ್ಷೆಯ ದಿನಗಳೂ ಬಂದವು. ಉಚ್ಚ ಜೀವನದ ಉನ್ಮುಖನಾದ ನಾನು ಎಲ್ಲಾ ಪರೀಕ್ಷೆಗಳನ್ನೂ ಚೆನ್ನಾಗಿ ಮಾಡಿದೆ. ಸೂಟಿಯ ದಿನಗಳೂ ಪ್ರಾರಂಭವಾದವು. ಮನೆಗೆ ಹೋಗಬಾರ ದೆಂದೆಣಿಸಿದೆ. ಆದರೆ ಮನೆಗೆ ಹಿಂತಿರುಗಿ ಬಾ ಎಂದು ಪತ್ರದ ಮೇಲೆ ಪತ್ರ ಗಳು ಬರಲಾರಂಭಿಸಿದವು ಇಂದುವನ್ನು ಬಿಟ್ಟು ಹೋಗಬೇಕಲ್ಲಾ ಎಂಬ ವ್ಯಥೆಯೊಂದು ಕಡೆ. ತಂದೆತಾಯಿಗಳ ಅಗ್ರಹ ಮತ್ತೊಂದು ಕಡೆ. ಬೇರೆ ಹಾದಿ ಇಲ್ಲದೇ ಹೋಗಲೇಬೇಕಾಯಿತು.

ಆ ದಿನ ರಾತ್ರಿಯೇ ಪ್ರಯಾಣ ಮಾಡಬೇಕಾಗಿದ್ದುದರಿಂದ ಇಂದು ಮತಿಯೊಂದಿಗೆ ಹೇಳಿಬರಬೇಕೆಂದು ಸಂಜೆ ಹೊರಟೆ.

ಬಂಗಲೆಯ ಮುಂಭಾಗದಲ್ಲಿದ್ದ ತೋಟದಲ್ಲಿ ಇದ್ದ ಮಲ್ಲಿಗೆ ಬಳ್ಳಿಯ ಕೆಳಗೆ ನಿಂತು ಹೂ ಕೊಯ್ಯುತ್ತಲಿದ್ದಳು ಇಂದುಮತಿ. ಮೆಲ್ಲನೆ ಅವಳ ಬಳಿ ಹೋಗಿ ನಿಂತೆ. ಶಬ್ದವನ್ನು ಕೇಳಿ ಹಿಂತಿರುಗಿ ನನ್ನನ್ನು ಕಂಡು ನನ್ನ ಕೈಗ ಳನ್ನು ಹಿಡಿದುಕೊಂಡು ''ಈ ದಿನ ಇಷ್ಟೇಕೆ ತಡವಾಯಿತು? ನೀವು ಬಾರದೆ ಹೋಗುವಿರೇನೋ ಎಂದು ಗಾಬರಿಗೊಂಡಿದ್ದೆ." ಎಂದು ನಗುತ್ತ ನುಡಿದಳು.

''ಇಂದೂ, ಇಂದಿಗೆ ಕಲಾಶಾಲೆ ಮುಗಿಯಿತಲ್ಲವೇ? ಊರಿಗೆ ಬಾ ಎಂದು ಪತ್ರದ ಮೇಲೆ ಪತ್ರ ಬರಲಾರಂಭಿಸಿವೆ. ಏನು ಮಾಡಲಿ ಹೊಗಲೇ ಬೇಕಾಗಿದೆ'' ಎಂದೆ.

''ಅಹುದು. ಈ ದಿನದಿಂದ ನಿಮ್ಮ ಅಗಲಿಕೆಯನ್ನು ಹೇಗೆ ತಾಳಲಿ? ಎಂದು ಸಣ್ಣ ಹುಡುಗಿಯಂತೆ ಅತ್ತುಬಿಟ್ಟಳು.

"ಅಳಬೇಡ ಇಂದೂ; ನಮ್ಮೀರ್ವರನ್ನು ಬೇರ್ಪಡಿಸುವ ಶಕ್ತಿ ಈ ಲೋಕದಲ್ಲೇ ಇಲ್ಲ. ನನ್ನ ತಂದೆ ತಾಯಿಗಳು ನಮ್ಮ ಸಂಬಂಧಕ್ಕೆ ನಕಾರ ಸೂಚಿಸಲಾರರು. ನಾನು ನಿನ್ನನ್ನು ಖಂಡಿತವಾಗಿಯೂ ಕೈ ಬಿಡುವುದಿಲ್ಲ."

"ನಾನು ನಿಮ್ಮನ್ನೇ ನಂಬಿದ್ದೇನೆ. ಕೈ ಬಿಡಬೇಡಿ." ಎಂದು ಕಣ್ಣೀರನ್ನೊರಸಿಕೊಂಡಳು ಇಂದೂ.

ಬಹಳ ಕಷ್ಟಪಟ್ಟು ಒಬ್ಬರನ್ನೊಬ್ಬರು ಅಗಲಿದೆವು.

× × ×

ತಂದೆ ತಾಯಿಗಳ ಹತ್ತಿರ ಬಂದು ಬಹಳ ದಿನಗಳಾದವು. ಒಂದು ದಿನ ಮಧ್ಯಾಹ್ನ ಊಟವಾದ ನಂತರ ಮನೆಯಲ್ಲಿಯೇ ಕುಳಿತು ಇಂದುವಿನಿಂದ ಬಂದ ಪತ್ರವನ್ನು ಓದುತ್ತಿದ್ದೆ ಅದರಲ್ಲಿ ಅವಳು ನನ್ನ ಅಗಲಿಕೆಯಿಂದ ಬಳಲುತ್ತಿರುವ ವಿಧಾನವನ್ನು ಚೆನ್ನಾಗಿ ವಿವರಿಸಿದ್ದಳು. ಅದನ್ನು ಓದಿದಾಗ ನನಗೂ ಕಣ್ಣುಗಳಲ್ಲಿ ನೀರು ಬಂದವು ಆ ಸಮಯಕ್ಕೆ ಸರಿಯಾಗಿ, ನನ್ನ ತಾಯಿಯು, ಬಹಳ ವಾತ್ಸಲ್ಯಪೂರಿತವಾದ ಮಾತುಗಳನ್ನಾಡುತ್ತ ಬಂದು ನನ್ನ ಕೈಯಲ್ಲಿದ್ದ ಪತ್ರವನ್ನೂ ನನ್ನ ಕಣ್ಣಲ್ಲಿದ್ದ ಅಶ್ರುಗಳನ್ನೂ ನೋಡಿ "ಯಾರಪತ್ರ ಮಗು ಅದು" ಎಂದು ಕೇಳಿದಳು. ಆಗ ಏನು ಉತ್ತರ ಕೊಡಬೇಕೆಂದು ನನಗೇ ತೋಚಲಿಲ್ಲ ಹೆತ್ತ ತಾಯಿಯ ಬಳಿ ಸುಳ್ಳಾಡುವುದು ನನ್ನ ಮನಸ್ಸಿನಲ್ಲಿ ಬರಲಿಲ್ಲ ಆ ಸಮಯವೇ ಇಂದುಮತಿಯ ವಿಚಾರವಾಗಿ ಹೇಳಲು ಸರಿಯಾದುದು ಎಂದೆಣಿಸಿ, ತಾಯಿಯ ಮುಂದೆ ನಿಂತು ನಡೆದ ವಿಚಾರಗಳೆಲ್ಲವನ್ನೂ ಸವಿಸ್ತಾರವಾಗಿ ತಿಳಿಸಿದೆ ಇಂದೂವನ್ನು ಸೊಸೆಯಾಗಿ ಪಡೆವ ಆಕೆಯು ಧನ್ಯಳೆಂದೂ ಹೇಳಿದೆ. ಆಗದೆನ್ನಬಾರದೆಂದೂ ಹೇಗಾದರೂ ನಡೆಸಿಕೊಡಬೇಕೆಂದೂ ಬೇಡಿಕೊಂಡೆ

"ಅರಗಿನಂತಹ ತಾಯಿ, ಮರದಂತಹ ಮಕ್ಕಳು" ಎಂಬಂತೆ ನನ್ನ ತಾಯಿಯು ಸ್ವಭಾವತಃ ದಯಾಮಯಿ. "ಆಗಲಪ್ಪ, ನೋಡೋಣ ಈಗಲೇ ಅವರಿಗೆ ನಿನ್ನ ವಿವಾಹದ ಬಗ್ಗೆ ನಾಲ್ಕೈದು ಪತ್ರಗಳೂ ಬಂದಿವೆ ಅವನ್ನು ನೋಡಿ ನಿನ್ನ ಸಮ್ಮತಿಯನ್ನು ತಿಳಿಸಲು ಕರೆದುಕೊಂಡು ಬಾ ಎಂದು ನನ್ನನ್ನು ಕಳುಹಿಸಿದ್ದಾರೆ. ನೀನು ನೋಡಿದರೆ ಈ ಸ್ಥಿತಿಯಲ್ಲಿದ್ದೀ. ಕಣ್ಣೊರೆಸಿಕೋ; ಕೆಳಗೆ ಬಾ. ಅವರೊಂದಿಗೆ ಏನೂ ಹೇಳದೇ, ಯೋಚಿಸಿ ಹೇಳುತ್ತೇನೆಂದು ಮಾತ್ರ ಹೇಳು" ಎಂದು ಹೊರಟು ಹೋದರು.

ಏಳೆಂಟು ದಿನಗಳಾದರೂ ಇಂದೂವಿನ ಪತ್ರಗಳಿಲ್ಲ. ನನ್ನ ಪತ್ರಗಳಿಗೆ ಉತ್ತರವೂ ಇಲ್ಲ. ಯೋಚಿಸುತ್ತ ಕುಳಿತಿದ್ದ ನನ್ನ ಬಳಿ ನನ್ನ

ತಾಯಿಯು ಬಂದು "ಕೇಳಿದೆಯಾ ಮಗು ಸಮಾಚಾರ. ನೀನು ಹೇಳಿದ ಇಂದುಮತಿ, ಹೆಸರುವಾಸಿಯಾದ .ನಾಟ್ಯರಾಣಿ ಅವಳನ್ನು ಯಾರೋ ಒಬ್ಬ ಜಮೀಂದಾರ– ಅವಳ ತಾಯಿಗೆ ಎರಡು ಲಕ್ಷ ರೂಪಾಯಿಗಳನ್ನು ಕೊಟ್ಟು ಕರೆದುಕೊಂಡು ಹೋಗಿಬಿಟ್ಟನಂತೆ, ಕಡೆಗೂ ನೋಡಿದೆಯಾ? ಕುಲದ ಕಸಬು ಎಲ್ಲಿ ಹೋದೀತು" ಎಂದು ನುಡಿದರು.

ನನಗೆ ಆಕಾಶವೇ ಕಳಚಿಬಿದ್ದಂತಾಯಿತು. ಹೃದಯದಲ್ಲಿ ಯಾರೋ ಹೊಡೆದಂತಿತ್ತು. ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು "ಅಮ್ಮಾ, ಇದನ್ನು ನಿನಗಾರು ಹೇಳಿದರು?" ಎಂದು ಕೇಳಿದೆ. ಮದರಾಸಿನಿಂದ ಬಂದ ನಿಮ್ಮ ತಂದೆಯ ಸ್ನೇಹಿತರೊಬ್ಬರು ತಿಳಿಸಿದರಂತೆ. ಅಲ್ಲೆಲ್ಲ ಇದೇ ಮಾತಂತೆ, ನೀನು ಸುಮ್ಮನೇ ಚಿಂತಿಸಬೇಡ." ಎಂದು ಹೊರಟು ಹೋದರು. ಅಂದಿನಿಂದ ನನಗೆ ವಿಪರೀತ ಜ್ವರವು ಪ್ರಾರಂಭಿಸಿತು.

ಕೆಲವು ದಿನಗಳು ಕಳೆದವು ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದೇನೆಂದು ತಿಳಿದು ಬಂತು ಅದರಿಂದ ನನ್ನ ಸಮಾಧಾನ ವಾಗುವುದಕ್ಕೆ ಮಾರಾಗಿ ದಾರುಣ ವ್ಯಥೆಯೇ ಆಯಿತು. ಇಂದೂವಿನ ಬಗ್ಗೆ ನನಗೆ ಮುಂದೆ ವಿಚಾರಗಳೇ ತಿಳಿಯಲಿಲ್ಲ. ಇಷ್ಟರಲ್ಲಿ ನಮ್ಮ ತಂದೆಯವ ರನ್ನು ರಾಜಮಹೇಂದ್ರಪುರಕ್ಕೆ ಬದಲೀ ಮಾಡಿದರು. ಕಾಲ ಕಳೆಯಿತು; ನೋವು ಹಳೆಯದಾಯಿತು. ತಂದೆ ತಾಯಿಗಳ ತೃಪ್ತಿಗಾಗಿ ನಿನ್ನನ್ನೂ ಮದುವೆಯಾದೆ. ಮದುವೆಯ ನಂತರ ಕರ್ತವ್ಯಪಾಲನೆಗಾಗಿ ನಿನ್ನನ್ನೂ ಪ್ರೀತಿಸಲು ಯತ್ನಿಸಿದೆ, ಅಷ್ಟು ಯಶಸ್ವಿಯಾಗಲಿಲ್ಲ. ಆದರೆ ದಿನಗಳುರುಳಿ ದಂತೆ ನೀನೇ ನನ್ನನ್ನು ಪೂರ್ತಿ ವಶಪಡಿಸಿಕೊಂಡು ಹಳೆಯ ನೋವಿಗೊಂದು ಬಾಯುಬೆಣೆಯಾಗಿ ನನ್ನ ಹೃದಯವನ್ನು ಕಾಪಾಡಿದೆ.........

ನೀನು ಒಂದು ಬಾರಿ ತವರು ಮನೆಗೆ ಹೋದಾಗ ನಾನು ಹಾಗೆಯೇ ಅಡ್ಡಾಡಲು ಬೀದಿಗೆ ಹೋಗಿದ್ದೆ. ಯಾರೋ ಹಿಂದಿನಿಂದ ಕರೆದಂತೆನಿಸಿ ಹಿಂತಿರುಗಿ ನೋಡಿದೆ ಸುಕುಮಾರನು ಬರುತ್ತಲಿದ್ದ. ಅವನು ಹತ್ತಿರ ಬಂದೊಡನೆ

"ಇಂದೂ ಆ ಜಮೀಂದಾರರೊಂದಿಗೆ ಸುಖವಾಗಿರುವಳಲ್ಲವೇ?" ಎಂದು ಕೇಳಿದೆ.

"ಜಮೀಂದಾರರು ಯಾರಪ್ಪಾ? ನಿನಗಾಗಿ ಕಾದು ಕಾದು ಹಣ್ಣಾಗಿ ಕೊನೆಗೆ ಪ್ರಾಣಬಿಟ್ಟಳು" ಎಂದು ದುಃಖದಿಂದ ನುಡಿದ.

ಅವನಿಂದ ಈ ಎಲ್ಲ ವಿಷಯವನ್ನು ಸಂಗ್ರಹಿಸಿದೆ ನಾನು ಹೋದ ಕೆಲ ಕಾಲ ಪತ್ರಗಳಿಗೆ ಉತ್ತರ ಬರಲು ಸಮಾಧಾನದಿಂದಿದ್ದಳಂತೆ. ಆ ನಂತರ ಉತ್ತರಗಳಿಲ್ಲದೇ ಹೋಗಲು ಮನಸ್ಸಿನಲ್ಲೇ ಕೊರಗಲಾರಂಭಿಸಿದ ಳಂತೆ.

ಇವಳು ಬರೆದ ಪತ್ರಗಳನ್ನು, ನನಗೆ ತಿಳಿಯದೇ ಪಡೆದು, ಬಚ್ಚಿಟ್ಟು ಅವಳ ಮೇಲೆಯೇ ಒಂದು ದುರ್ವರ್ತನೆಯ ಆರೋಪ ಮಾಡಿ ನನ್ನ ಮನ ಸ್ಸನ್ನೂ ಬದಲಿಸಲು ನನ್ನ ತಂದೆ ತಾಯಿಗಳು ಮಾಡಿದ ಒಳಸಂಚು ಈಗ ನನಗೆ ತಿಳಿಯಿತು.

ದಿನಗಳುರುಳಿದಂತೆ ಮನೋವ್ಯಾಧಿಗೆ ಗುರಿಯಾಗಿ, ಉತ್ಸಾಹಹೀನ ಳಾಗಿ ನಾಟ್ಯವನ್ನೂ ಬಿಟ್ಟು, ಮನೆಯಲ್ಲಿಯೇ ಇರಹತ್ತಿದಳಂತೆ.

ಒಮ್ಮೆ ನಾನು, ನೀನು ಬೀಚಿಗೆ ತಿರುಗಾಡಲು ಹೋದಾಗ ಅವಳು ನೋಡಿದಳಂತೆ. ಸುಕುಮಾರನೂ, ಅವನ ತಾಯಿಯೂ ನನ್ನನ್ನು ನಿಂದಿಸ ಬೇಕು, ದಂಡಿಸಬೇಕು ಎಂದು ನಿಶ್ಚಯಿಸಿದ್ದರಂತೆ–ಆದರೆ ಇಂದೂ ಅವರನ್ನು ತಡೆದು "ಅಣ್ಣಾ, ಅಮ್ಮಾ, ನಾನಿನ್ನು ಅವರ ಸುಖಜೀವನದಲ್ಲಿ ಕಲ್ಲು ಹಾಕ ಲೊಲ್ಲೆ. ನನ್ನನ್ನು ಮದುವೆಯಾಗಲು ತಂದೆ ತಾಯಿ ಗಳು ಒಪ್ಪಲಾರದ್ದಕ್ಕೆ ಅವರು ಏನು ಮಾಡಿಯಾರು? ಅವರನ್ನೀಗ ತಡೆಯಬೇಡಿ" ಎಂದು ಹೇಳಿಬಿಟ್ಟ ಳಂತೆ. ಮುಂದೆ ಕೆಲ ದಿನಗಳಲ್ಲೇ ಇಂದುಮತಿ ನನ್ನ ನಿನ್ನ ದಾರಿಗಳನ್ನು ಸುಗುಮವಾಗಿಸಲೆಂದು ಇಹಲೋಕದಿಂದ ತನ್ನ ದಾರಿಯಿಂದ ಕಾಲ್ದೆಗೆದ ಳಂತೆ. ಅವಳು ಬಿಟ್ಟುಹೋದದ್ದು ಇದಿಷ್ಟು ಸೊತ್ತು ಮಾತ್ರ. ಈ ದಿನ ನೀನು ಅದೆಲ್ಲವನ್ನೂ ಹೊರತೆಗೆದು ನನ್ನ ಹಳೆಯ ನೆನಪುಗಳೆಲ್ಲವನ್ನೂ ಕೆಣಕಿದೆ"

"ಪಾಪ ಇಂದೂ" ಎಂದು ನಾನು ಉಸುರ್ಗರೆದು ಎದ್ದೆ. ನನ್ನ ಮನಸ್ಸು ಆಗ ದುಃಖದಿಂದ ತುಂಬಿ ಹೋಗಿತ್ತು. ಇದರಿಂದಾಗಿ ನನ್ನ ದಾರಿ ಸುಗಮ ವಾದ ಸಂತಸವೋ, ನನ್ನ ಪತಿಯ ವ್ಯಥೆಯ ಪರಿತಾಪದ ಪ್ರತಿಬಿಂಬವೋ, ಪ್ರೇಮಕ್ಕಾಗಿ ಅವಳಂಥ ತ್ಯಾಗದ ಭಾಗ್ಯ ನನಗಿಲ್ಲವೆಂಬ ನಿರ್ವೇದವೋ,– ಆದದ್ದಾಗಿ ಹೋಯ್ತೆಂಬ ತಾತ್ವಿಕವಾದವೋ; ಆದದ್ದೆಲ್ಲಾ ಒಳಿತೇ ಎಂಬ ವ್ಯವಹಾರ ಜ್ಞಾನವೋ–ಅಂತೂ ಯಾವದು ನನ್ನನ್ನು ಜೀವನಕ್ಕೆ ಅಂಟಿಸಿಟ್ಟ ದೆಯೋ ಎಂಬುದನ್ನು ತಿಳಿಯದವಳಾದೆ ನಾನು ಮಾತ್ರ!

# ಮೋಹನ ರಾಗ

❀

ಪೂರ್ಣಚಂದ್ರನ ಕಿರಣಗಳು ಎಲ್ಲೆಡೆಯಲ್ಲಿಯೂ ಪಸರಿಸಿವೆ. ಈ ಲೋಕದ ಪರಿವಿಲ್ಲದೆ ಮಹಡಿಯ ಮೇಲಿನ ವರಾಂಡದಲ್ಲಿ ಗೋಡೆಯ ಮೇಲೆ ಕೈಯಿಟ್ಟುಕೊಂಡು ಅಂಬುಜಾ ನಿಂತಿದ್ದಾಳೆ. ಅವಳಿಗೆ ಸುಮಾರು ಇಪ್ಪತ್ತೆರಡು ವರ್ಷಗಳಿದ್ದವು. ಸೌಂದರ್ಯವೇ ಮೂರ್ತೀಭವಿಸಿದಂತಿದ್ದರೂ ಅವಳ ಮುಖದ ಮೇಲೆ ಚಿಂತೆಯ ತೆರೆ ಬಿದ್ದಿತ್ತು. ಅವಳು ಈ ಲೋಕದ ಸೌಂದರ್ಯವನ್ನು ಕಾಣಲಶಕ್ಯಳಾಗಿದ್ದಳು. ಅವಳ ದೃಷ್ಟಿಯನ್ನು ಯಾರೋ ಕಸಿದುಕೊಂಡಿದ್ದರು.

ದೂರದಲ್ಲಿ ಯಾರದೋ ಮೆರವಣಿಗೆ ಹೊರಟಿತ್ತು. ಅದರಲ್ಲಿಯ ನಾಗಸ್ವರದವಾದ್ಯದವನು 'ಮೋಹನ' ರಾಗವನ್ನು ಅಪೂರ್ವವಾಗಿ ಬಾರಿಸುತ್ತಿದ್ದನು. ಅಂಬುಜೆಯ ಮನದಲ್ಲಿ ಆ ರಾಗದ ನಿನಾದವು, ಹಳೆಯ ನೆನಪುಗಳನ್ನು ಕೆರಳಿಸಿತು.

× × ×

ಆರು ವರ್ಷಗಳ ಹಿಂದೆ ಅಂಬುಜ ಕುರುಡಿಯಾಗಿದ್ದಿಲ್ಲ ಆ ದಿನಗಳಲ್ಲಿ "ಬೆಜವಾಡ ಅಂಬುಜಾ" ಎಂದರೆ ಅರಿಯದವರೇ ಇದ್ದಿಲ್ಲ. ನಾಟ್ಯದಲ್ಲಿಯೂ ಸೌಂದರ್ಯದಲ್ಲಿಯೂ ಅವಳನ್ನು ಮೀರಿಸುವವರಾರೂ ಇದ್ದಿಲ್ಲ. ಯಾವ ಶ್ರೀಮಂತರ ಮನೆ ಮದುವೆಯಾದರೂ, ಮೆರವಣಿಗೆಯಲ್ಲಿ ಅಂಬುಜಳ ನೃತ್ಯ ಆಗಲೇಬೇಕು. ಅಂಬುಜಾ ಬರೀ ಮೆರವಣಿಗೆಗಳಲ್ಲಿ ನೃತ್ಯಕ್ಕೆ ಹೋಗುವಳೇ ವಿನಹ ಅನವಶ್ಯಕವಾದಲ್ಲೆಲ್ಲಾ ಹೋಗಿ ನೃತ್ಯ ಮಾಡುವವಳಾಗಿದ್ದಿಲ್ಲ. ಅವಳಲ್ಲಿ ಇನ್ನೂ ಒಂದು ವಿಶೇಷವಿತ್ತು; ಕುಲದ ಕಸುಬನ್ನು ಅನುಸರಿಸದೆ ತನ್ನ ಮನಸ್ಸಿಗೆ ಒಪ್ಪಿದವನನ್ನು ಮದುವೆಯಾಗುವುದು; ಇಲ್ಲವೇ ಆಜನ್ಮ ಕನ್ನಿಕೆಯಾಗಿಯೇ ಉಳಿಯಬೇಕೆಂದೂ ಅವಳು ತೀರ್ಮಾನಿಸಿದ್ದಳು.

ಅಂದು ಶುಕ್ರವಾರ ಒಬ್ಬ ಶ್ರೀಮಂತರ ಮನೆಯ ಮದುವೆ, ಮೆರವಣಿಗೆಯ ಮುಂದೆ ನೃತ್ಯಕ್ಕಾಗಿ ಅಂಬುಜಳನ್ನು ಕರೆದಿದ್ದರು. ಪ್ರಖ್ಯಾತ ನಾಗಸ್ವರ ವಿದ್ವಾನ್ ರಾಜಮಹೇಂದ್ರಿಯ ಸುಂದರನನ್ನು ನಾಗಸ್ವರಕ್ಕೆ ಕರೆದಿದ್ದರು

ರಾತ್ರಿ ಹತ್ತು ಗಂಟೆಗಳಿರಬಹುದು, ಸುಂದರವಾಗಿ ಅಲಂಕರಿಸಲ್ಪಟ್ಟ ಮೋಟಾರ ಕಾರಿನಲ್ಲಿ ಮದು-ಮಕ್ಕಳು ಬಂದು ಕುಳಿತರು. ಅನೇಕ ಪ್ರಕಾಶ ಮಯವಾದ ಪೆಟ್ರೋಮ್ಯಾಕ್ಸ ದೀಪಗಳ ಬೆಳಕಿನಲ್ಲಿ, ಬಾಣ ಬಿರುಸುಗಳ ಶಬ್ದದ ಹಿಂದೆ ಬ್ಯಾಂಡಿನವರು ಮುಂದೆ ನಡೆದಿರಲು ಮೆರವಣಿಗೆ ಹೊರಟಿತು. ಅದರ ಹಿಂದೆ ದೀಪದ ಬೆಳಕಿನಲ್ಲಿ ಹೊಳೆಯುವ ವಜ್ರ ವೈಡೂರ್ಯಾಭರಣ ಗಳೊಂದಿಗೆ, ತೇಜೋಮಯವಾದ ಜರತಾರಿ ಸೀರೆ ಕುಪ್ಪುಸಗಳೊಂದಿಗೆ ಕಾಲಲ್ಲಿ ಗೆಜ್ಜೆಗಳು ಶಬ್ದ ಮಾಡುತ್ತಿರಲು, ತಾಳಗಾರರು ಹಿಂದೆ ಬರುತ್ತಲಿ ರಲು ಅಂಬುಜಾ ನೃತ್ಯ ವೈಖರಿಯಿಂದ ನಡೆದಿದ್ದಾಳೆ ಅಂದಿನ ಅವಳ ಸೌಂದ ರ್ಯವು ಎಲ್ಲರನ್ನೂ ಮೋಹಿಸುವಂತಿತ್ತು ಅವಳ ಸುತ್ತಲೂ ಜನರ ದಟ್ಟವಾದ ಗುಂಪು ಯಾವಾಗಲೂ ಕೂಡಿರುತ್ತಿತ್ತು. ಸ್ವಲ್ಪ ದೂರದಲ್ಲಿ ಸುಂದರ ತನ್ನ ನಾದಸ್ವರ ಮೇಳದೊಂದಿಗೆ ನಡೆದಿದ್ದ. ಆತನ ಕಿವಿಯಲ್ಲಿಯೂ ಕೈಗಳಲ್ಲಿಯೂ ವಜ್ರಾಭರಣ; ಮೈಮೇಲೆ ಅಗಲವಾದ ಜರತಾರಿಯ ಅಂಗ ವಸ್ತ್ರ.

ಮೊದಲಿಗೆ ಸುಂದರಂ ಬಾರಿಸಲು ಪ್ರಾರಂಭಿಸಿದ; ಅಪೂರ್ವವಾದ ಮೋಹನ ರಾಗವು ನಾದಸ್ವರದ ದ್ವಾರದಿಂದ ಕೇಳುವವರ ಕಿವಿಗಳಿಗೆ ಜೇನು ಸುರಿಸುವಂತೆ ಬರುತ್ತಿತ್ತು. ಅಲ್ಲಿಯವರೆಗೂ ತಗ್ಗಿಸಿದ ತಲೆಯಿಂದ ನಡೆದು ಬರುತ್ತಿದ್ದ ಅಂಬುಜಾ, ಈ ಅಪೂರ್ವ ಗಾಯನವನ್ನು ಕೇಳಿದೊಡನೆಯೇ ತಲೆ ಎತ್ತಿ ಸುಂದರನನ್ನು ನೋಡಿದಳು ಮೋಹನ ರಾಗವೆಂದರೆ ಅವಳಿಗೆ ಅತಿ ಇಷ್ಟ. ಅದರಲ್ಲೂ ಈಗ ಕೇಳಬೇಕೆ? ಇದುವರೆಗೂ ಸುಂದರನ ಹೆಸ ರನ್ನು ಮಾತ್ರ ಕೇಳಿದ್ದಳು ಇಂದು ಅವನನ್ನು ಎದುರಿನಲ್ಲಿ ಕಂಡು ಅವಳು ಅವನಲ್ಲಿಯ ಅಮೋಘವಿದ್ಯೆಗೆ ತಲೆಬಾಗಿದಳು.

ವಾದನ ಕಲೆಯ ಜೊತೆಗೆ ಸುಂದರಂನ ಸ್ವರೂಪ ಹೆಸರಿಗೊಪ್ಪು ವಂತಿತ್ತು. ಅದು ಅವಳ ಮನದಲ್ಲಿ ಅಚ್ಚೊತ್ತಿತು. ಅವಳು ಮನಸ್ಸನ್ನು ಅಧೀನದಲ್ಲಿ ತರಲಾರದೇ ಹೋದಳು. ಕ್ಷಣಕ್ಕೊಂದು ಬಾರಿ ಅವನ ಕಡೆ ನೋಡುತ್ತ ನಡೆದಳು. ಒಬ್ಬರ ಮನೆಯ ಮುಂದೆ ಮೆರವಣಿಗೆ ನಿಂತಿತು. ಅಲ್ಲಿ ಅಂಬುಜ ನಾಟ್ಯವಾಡಲಾರಂಭಿಸಿದಳು.

ಅದುವರೆಗೆ ಒಬ್ಬರನ್ನೂ ನಾಟ್ಯವಾಡಿ ನೋಡದ ಸುಂದರನು ಈಗ ಗೆಜ್ಜೆಯ ಧ್ವನಿಕೇಳಿ ಅಂಬುಜಳಿದ್ದಲ್ಲಿಗೆ ಬಂದ. ಅವಳ ಅದ್ಭುತರೂಪ, ಮನ ಮೋಹಕ ನೃತ್ಯ ಅವನ ಮನಸ್ಸನ್ನು ಸೂರೆಗೊಂಡವು. ಅವಳನ್ನು ಎವೆ ಯಿಕ್ಕದೆ ನೋಡಲಾರಂಭಿಸಿದ.

ಅಕಸ್ಮಾತ್ತಾಗಿ ಅವನ ಕಡೆ ನೋಡಿದ ಅಂಬುಜಳ ಕಣ್ಣುಗಳೂ, ಸುಂದರನ ಕಣ್ಣುಗಳೂ ಒಂದು ಗೂಡಿ ಪ್ರೇಮಪಾರದ ಪ್ರಥಮ ಪುಸ್ತಕವನ್ನು ಕ್ಷಣಾರ್ಧದಲ್ಲಿ ತೆರೆದು ಮುಗಿಸಿದವು ಮರುಕ್ಷಣ ಅವಳು ನಾಚಿಕೆಯಿಂದ ಮುಖವನ್ನು ಮತ್ತೊಂದು ಕಡೆ ತಿರುಗಿಸಿಬಿಟ್ಟಳು. ಮೆರವಣಿಗೆ ಮುಗಿಯುವವರೆಗೂ ಅವರು ಹೀಗೆಯೇ ಒಮ್ಮೆ ನೋಡಿ ಒಮ್ಮೆ ಬಿಟ್ಟು ಆಟವಾಡುತ್ತಿದ್ದರು.

ರಾತ್ರಿ ಮನೆಗೆ ಹಿಂತಿರುಗಿದ ಅಂಬುಜಾ ಬಹಳ ಸಂತೋಷದಿಂದಿದ್ದಳು ಆವಳ ಮನದಲ್ಲಿ ಅವಳು ಅರಿಯಲಾರದಂತಹ ಸಂತೋಷವು ಹೊಕ್ಕು ಅವಳನ್ನೀರೀತಿಮಾಡಿತ್ತು. ತಾಯಿಯ ಬಳಿ ಬಂದು ಅಮ್ಮಾ, ಈ ದಿನ ಮೆರವಣಿಗೆಯಲ್ಲಿ ಯಾರು ನಾಗಸ್ವರ ಬಾರಿಸಿದರು ತಿಳಿಯಿತೇ? ನಾನು ಬಹಳ ದಿನಗಳಿಂದ ಕೇಳಬೇಕೆಂದು ಆತುರಗೊಂಡಿದ್ದ ಆ ಪ್ರಖ್ಯಾತ ವಿದ್ವಾನ್, ರಾಜಮಹೇಂದ್ರಿಯ ಸುಂದರ್ ಅವರು. ಆಹಾ, ಏನು ಅದ್ಭುತ ವಾದನ ಅಮ್ಮಾ! ಅವರು ಬಾರಿಸಿದ ಮೋಹನವು ಇನ್ನೂ ನನ್ನ ಕಿವಿಗಳಲ್ಲಿ ದನಿಗುಡುತ್ತಿದೆ" ಎಂದಳು.

''ನೀನೇನೋ ಬಹಳ ಹೊಗಳುತ್ತೀ ಅಂಬುಜಾ; ಆದರೆ ಆ ಸುಂದರ ಯಾರು ಗೊತ್ತೇ? ಸಾಕ್ಷಾತ್ ನಿಮ್ಮ ಮಾವನ ಮಗ, ಸಣ್ಣವನಿರುವಾಗ ನನ್ನೊಂದಿಗೆ ಜಗಳವಾಗಿ ಹೊರಟು ಹೋಗಿದ್ದ'' ಎಂದು ತಾಯಿ ರುಕ್ಮಿಣಿಯು ಹೇಳಿದೊಡನೆ ಅಂಬುಜಳ ಸಂತೋಷಕ್ಕೆ ಎಲ್ಲೆಯೇ ಇಲ್ಲದೆ ಹೋಯಿತು.

"ಹಾಗಾದರೆ ಸುಂದರನನ್ನು ನಮ್ಮ ಮನೆಗೆ ಕರೆದುಕೊಂಡು ಬರಬಾರದೇಕಮ್ಮಾ" ಎಂದ ಅಂಬುಜ ಮುಂದೇನೂ ಹೇಳಲಾರದೇ ತಲೆತಗ್ಗಿಸಿದಳು

ಮಗಳ ಮನಸ್ಸನ್ನು ಕ್ಷಣದಲ್ಲಿ ತಿಳಿದುಕೊಂಡ ರುಕ್ಮಿಣಿ "ಅಂಬು" ನಿನ್ನ ಮನಸ್ಸಿನಲ್ಲಿರುವುದನ್ನು ನಾನರಿತಿದ್ದೇನೆ. ನಿಮ್ಮ ಸೋದರ ಮಾವನಿಗೂ ನನಗೂ ಇರುವ ಮನಸ್ತಾಪವನ್ನು ನೆನಪಿನಲ್ಲಿಟ್ಟುಕೊಂಡು ನಾನು ಸುಂದರನನ್ನು ಕರೆಯುವದಿಲ್ಲವೆಂದು ನೀನು ತಿಳಿದಿರಬಹುದು. ಆದರೆ ಜಗಳವಾಡಿದ ನಿನ್ನ ಮಾವನು ನನಗೊಂದು ಕಾಗದ ಬರೆದು ಅದರಲ್ಲಿ ಸುಂದರಂ ಇಲ್ಲಿಗೆ ಬರುವದಾಗಿಯೂ ಅವನನ್ನು ನಮ್ಮ ಮನೆಗೆ ಕರೆದುಕೊಂಡು ಬರಬೇಕೆಂದೂ ಬರೆದಿದ್ದಾನೆ." ಎಂದು ಹೇಳಿ, "ಹೋಗಿ ಮಲಗಿಕೊ; ಹೋಗು ಮಗು; ನಿನ್ನೆ ರಾತ್ರಿಯೆಲ್ಲವೂ ನಿದ್ದೆ ಇಲ್ಲ" ನಾವೇ ಅವನ ಮನೆಗೆ ಹೊಗೋಣ. ಅವ

ನೀಗ ಪ್ರಖ್ಯಾತನಾದ ನಾದಸ್ವರ ವಿದ್ವಾನ್. ನಮ್ಮಂಥವರ ಮನೆಗೆ ಅವನೇಕೆ ಬರುತ್ತಾನೆ ಹೇಳು. ಹೋಗಿ ಮಲಗಿಕೋ ನಾಳೆ ನೋಡುವ" ಎಂದು ಕಳುಹಿದಳು.

.... .... ....

ಮರುದಿನ ಪ್ರಾತಃಕಾಲ ಅಂಬುಜ ಎಳುವುದಕ್ಕೆ ಬಹಳ ಹೊತ್ತಾಯಿತು. ಹಿಂದಿನ ರಾತ್ರಿ ಸುಖವಾಗಿ ನಿದ್ದೆಹೋಗಿದ್ದುದೇ ಇದರ ಕಾರಣ. ಕೆಳಗೆ ಬಂದವಳೇ ಅವಳು, ತಾಯಿಯು ಹೊರಗೆ ಹೋಗಲು ತಯಾರಾಗಿರುವದನ್ನು ಕಂಡಳು. ಬಾಗಿಲಲ್ಲಿ ಅವರ ಮನೆಯ *ಥಮಣಿಯು ನಿಂತಿತ್ತು

"ಇಷ್ಟರೊಳಗೆ ಹೊರಟೇಬಿಟ್ಟೆಯಾ ಅಮ್ಮಾ" ಎಂದು ಕೇಳುತ್ತ ಕೆಳಗಿಳಿದಳು ಅಂಬುಜಾ.

"ಹೌದು; ನೀನಿಷ್ಟು ಹೊತ್ತೇಕೆ ಮಲಗಿದ್ದೀ. ಹೋಗು, ಬೇಗ ಹೋಗಿ ಸಿದ್ಧಳಾಗಿ ಬಾ, ಸುಂದರನ ಮನೆಗೆ ಹೋಗಬೇಡವೆ?" ಎಂದು ಅವಸರದಿಂದ ನುಡಿದಳು.

"ಇಲ್ಲಮ್ಮಾ, ನಾನು ಬರುವದಿಲ್ಲ. ನೀನೊಬ್ಬಳೇ ಹೋಗಿ ಬಾ." ಎಂದು ಹೇಳುತ್ತ ಅಂಬುಜಾ ಒಳಗೆ ಹೊರಟು ಹೋದಳು.

ರುಕ್ಮಿಣಿ ಗಾಡಿಯಲ್ಲಿ ಕುಳಿತು ಹೊರಟು ಹೋದಳು. ಒಳಗೆ ಹೋದ ಅಂಬುಜಾ ಚನ್ನಾಗಿ ಅಲಂಕಾರ ಮಾಡಿಕೊಳ್ಳಲನುವಾದಳು ಆಗಾಗ್ಗೆ ಹೊರಗೆ ಗಾಡಿ ಬರುವುದೇ ಎಂದು ಬಂದು ನೋಡುವಳು ಎಲ್ಲ ಅಲಂಕಾರವನ್ನು ಮುಗಿಸಿಕೊಂಡು ಒಂದು ಬಾರಿ ಅವಳು ಕನ್ನಡಿಯಲ್ಲಿ ನೋಡಿಕೊಂಡಾಗ ತನ್ನ ಪ್ರತಿಬಿಂಬವನ್ನು ನೋಡಿ ತಾನೇ ನಾಚಿದಳು.

ಕೊನೆಗೆ ಅವಳ ಆ ಆತುರತೆಗೆ ಅಂತವೂ ಬಂತು. ಗಾಡಿಯೂ ಬಂದಿತು. ರುಕ್ಮಿಣಿಯು "ಅಂಬುಜಾ–ಇಲ್ಲಿ ನೋಡಮ್ಮಾ. ಯಾರು ಬಂದಿರುವರೋ ನೋಡು. ರಾತ್ರಿಯೆಲ್ಲವೂ ಎಡೆಬಿಡದೆ ತಪಿಸಿದೆಯೋ ಬಂದು ನೋಡು" ಎಂದು ಕರೆದಳು. ಆದರೆ ಕುಲಕ್ಕೆ ಸಲ್ಲದ ನಾಚಿಕೆಯು ಅವಳಿಗಾಗ ಬಂದು ಅವಳನ್ನು ಅಲ್ಲಿಂದ ಏಳಲಾರದಂತೆ ಮಾಡಿತು. ಮಗಳು ಬಾರದಿದ್ದುದನ್ನು ಕಂಡ ರುಕ್ಮಿಣಿ ತಾನೇ ಅವಳ ಹತ್ತಿರ ಬಂದಳು.

"ಅಲ್ಲೇ ಅಂಬುಜಾ, ರಾತ್ರಿ ಎಲ್ಲವೂ ನನ್ನನ್ನು ಮಲಗಲು ಬಿಡದೆ ಈ ಕ್ಷಣವೇ ಸುಂದರನನ್ನು ಕರೆದುಕೊಂಡು ಬಾ ಎಂದು ತೊಂದರೆಪಡಿಸಿದೆ

* ಒಂದು ಬಗೆಯ ಬುರುಕಿಯ ವಾಹನ.

ಯಲ್ಲವೇ ಈಗ ಕರೆದುಕೊಂಡು ಬಂದವನನ್ನು 'ಬಾ' ಎಂದು ಕರೆಯದೇ ಇದ್ದರೆ ಏನು ಅರ್ಥ?" ಎಂದು ಗಟ್ಟಿಯಾಗಿ ಹೇಳಿದಳು.

ತಾಯಿಯ ಹಿಂದೆ ತಲೆ ಬಗ್ಗಿಸಿಕೊಂಡು ಅಂಬುಜಾ ವರಾಂಡಕ್ಕೆ ಬಂದಳು. ಅಲ್ಲಿ ಅನೇಕವಿಧ ಅಭಿನಯಗಳಲ್ಲಿ ಚಿತ್ರಿಸಿದ ಅಂಬುಜಳ ಚಿತ್ರಗಳು ತೂಗುಹಾಕಲ್ಪಟ್ಟಿದ್ದವು. ಅವುಗಳನ್ನು ನೋಡುತ್ತಲಿದ್ದ ಸುಂದರ ಕಾಲಡಿಗಳ ಶಬ್ದವನ್ನು ಕೇಳಿ ಹಿಂತಿರುಗಿ ನೋಡಿದ. ಅದೇ ಸಮಯದಲ್ಲಿ ತಲೆ ಎತ್ತಿದ ಅಂಬುಜ ಅವನನ್ನೇ ದಿಟ್ಟಿಸಿ ನೋಡಿದಳು. ನಾಲ್ಕೂ ಕಣ್ಣುಗಳು ಒಂದುಕ್ಷಣ ಕೂಡಿದವು.

"ಬನ್ನಿ ಸುಂದರ್" ಎಂದೆನ್ನುತ್ತ ನಾಚಿಕೆಯಿಂದ ಒಳಗೆ ನುಸುಳಿದಳು ಅಂಬುಜ.

ಸುಂದರ ತನ್ನ ಊರಿಂದ ಅಂಬುಜಳ ಊರಿಗೆ ಬಂದು ಒಂದು ತಿಂಗಳ ಮೇಲಾಗಿ ಹೋಗಿತ್ತು. ಮೊದಲಿಗೆ ಒಂದು ಮದುವೆಗೆಂದು ಬಂದವನಿಗೆ ಮೇಲಿಂದ ಮೇಲೆ ಗಿರಾಕಿಗಳು ಬರಹತ್ತಿದವು. ಆದ್ದರಿಂದ ಅವನು ಅಂಬುಜಳ ಆತಿಥ್ಯದಲ್ಲಿ ಅಲ್ಲಿಯೇ ಇರಬೇಕಾಯಿತು. ಸುಂದರ–ಅಂಬುಜರು ಎಡೆಬಿಡದ ಪ್ರೇಮಿಗಳಾಗಿ ಬಿಟ್ಟರು. ಬೆಳದಿಂಗಳ ರಾತ್ರಿಯಲ್ಲಿ ಚಪ್ಪರವಿಲ್ಲದ ಮೇಲ್ಮಾಳಿಗೆಯಮೇಲೆ ಕುಳಿತು ಸುಂದರ ನಾಗಸ್ವರ ಬಾರಿಸುವನು. ಅವನು ನೀಡಿದ ಅಮೃತ ಗೀತವನ್ನು ಚ ಲ ನ ವ ಲ ನ ಗ ಳಿ ಲ್ಲ ದೆ ಸುಖದಿಂದ ಸವಿಯುತ್ತಿದ್ದಳು ಅಂಬುಜಾ. ಎಲ್ಲಕ್ಕಿಂತಲೂ ಮೋಹನ ರಾಗ ಬಾರಿಸಿದನೆಂದರೆ ಅವಳ ಆನಂದಕ್ಕೆ ಪಾರವೇ ಇಲ್ಲ. ಒಂದು ದಿನ ಸುಂದರ ತಮಾಷಿಗಾಗಿ "ಅಂಬುಜಾ, ನಿನಗೆ ಎಲ್ಲರಾಗಗಳಿಗಿಂತಲೂ ಮೋಹನ ರಾಗದಲ್ಲಿ ಏಕಷ್ಟು ಆಸಕ್ತಿ" ಎಂದು ಕೇಳಿದ.

"ಸುಂದರಂ, ಈ ಮೋಹನ ರಾಗವೇ ನನ್ನನ್ನು ನಿನ್ನೆಡೆಗೆ ಸೆಳೆಯಿತು. ಆದ್ದರಿಂದ ನನಗದರಲ್ಲಿ ಅಧಿಕ ಆಸೆಯುಂಟಾಗಿದ್ದಲ್ಲಿ ತಪ್ಪೇನು'' ಎಂದುತ್ತರವಿತ್ತಳು.

ಅವರಿಬ್ಬರ ಮದುವೆಗೆ ಸುಂದರನ ತಂದೆಯ ಅನುಮತಿಯೂ ಸಿಕ್ಕಿತು. ವಿವಾಹದ ದಿನವೂ ನಿಶ್ಚಿತವಾಯ್ತು. ಇನ್ನೂ ಒಂದು ತಿಂಗಳು ಕಳೆಯಬೇಕು ಆ ಶುಭದಿನಕ್ಕೆ. ಆಗ ಅಂಬುಜ ಭೂಮಿಯಲ್ಲಿರುವಂತೆ ತೋರಲಿಲ್ಲ. ಸಂತೋಷ ಸಾಗರದಲ್ಲಿ ಈಜುತ್ತಲಿರುವ ಎರಡು ಹಂಸಗಳಂತೆ ಅವರು

ಇದ್ದರು. ಆದರೆ "ದೈವಮನ್ಯತ್ರಚಿಂತಯೇತ್" ಎಂಬುದನ್ನು ಅವಳಾಗ ಅರಿಯಲಾರದೇ ಹೋದಳು.

ಅಂದೇ ಆ ಸಂಭವ ನಡೆಯಿತು. ಅವಳ ಸಂತೋಷದ ಜೀವನದಲ್ಲಿ ಸಿಡಿಲು ಬಿದ್ದಿತು. ಮಗ್ಗುಲಿನ ಊರಿನಲ್ಲಿ ಒಂದು ಮದುವೆ, ಅದಕ್ಕೆ ಈರ್ವರಿಗೂ ಆಮಂತ್ರಣ ಬಂದಿತ್ತು. ಆರು ಗಂಟೆಗೆ ಈರ್ವರೂ ಹೊರಟರು ಅವರು ಮೆರವಣಿಗೆ ಮುಗಿಸಿ ಹಿಂತಿರುಗುವಾಗ ರಾತ್ರಿ ಹನ್ನೆರಡಾಗಿ ಹೋಗಿತ್ತು ಅಮಾವಾಸ್ಯೆಯ ಕಾರಿರುಳು, ಎದುರಿಗಿದ್ದವರು ಕಾಣಿಸದಂತಹ ಕತ್ತಲೆಕವಿದಿತ್ತು. ಎರಡೂ ಕಡೆಯಲ್ಲಿಯೂ ಮರಗಳಿಂದ ತುಂಬಿದ್ದ ದಾರಿಯಲ್ಲಿ, ಬರುತ್ತಲಿದ್ದ ಇವರ ಕಾರು ಒಂದು ಮರಕ್ಕೆ ಢಿಕ್ಕಿ ಹೊಡೆಯಿತು ಅದನ್ನು ತಿಳಿದು ಮುಂಭಾಗದಲ್ಲಿ ಕುಳಿತಿದ್ದ ಸುಂದರನೂ ಡ್ರೈವರನೂ ಪಕ್ಕಕ್ಕೆ ಜಿಗಿದರು. ಆದರೆ ಹಿಂದಿನ ಸೀಟಿನಲ್ಲಿ ಕುಳಿತಿದ್ದ ಅಂಬುಜಳಿಗೆ ಬಲವಾದ ಪೆಟ್ಟುಬಿತ್ತು ಕಾರಿನ ಗಾಜಿನ ಕಿಟಿಕಿ ಒಡೆದು ಗಾಜಿನ ತುಂಡುಗಳು ಅವಳ ಕಣ್ಣುಗಳಲ್ಲಿ ಅಡಗಿಹೋದವು.

"ಅಮ್ಮಾ" ಎಂದವಳೇ ಎಚ್ಚರದಪ್ಪಿ ಬಿದ್ದುಬಿಟ್ಟಳು, ಅಂಬುಜಾ

ಹತ್ತು ದಿನಗಳುರುಳಿದವು ತಾಯಿಯು ಅತಿ ಶ್ರಮವಹಿಸಿ ಕಷ್ಟಪಟ್ಟು ಶುಶ್ರೂಷೆ ಮಾಡಿದ ಕಾರಣ ಅಂಬುಜೆಗೆ ಗುಣವಾಯಿತು ವೈದ್ಯರೂ ಇನ್ನು ಪ್ರಾಣಕ್ಕೆ ಭಯವಿಲ್ಲೆಂದು ಹೇಳಿದರು.

"ಅಮ್ಮಾ"

"ಏನು ಅಂಬುಜಾ ನಿನಗೇನು ಬೇಕು "

"ಸುಂದರ್ ಎಲ್ಲಿದ್ದಾರಮ್ಮಾ ಅವರಿಗೆ ಗಾಯವಾಗಿಲ್ಲವೇ? ಎಂದು ಚಿಂತೆಯಿಂದ ಕೇಳಿದಳು.

"ನಿನಗೆ ಗಾಯವಾದ ದಿನವೇ ಯಾವುದೇ ಅವಸರ ಕಾರ್ಯವಿದೆ ಎಂದು ಹೇಳಿ ಹೋದವನು ಇನ್ನೂವರೆಗೂ ಬಂದಿಲ್ಲ. ತಾನೀ ಸ್ಥಿತಿಯಲ್ಲಿದ್ದರೂ ತನ್ನ ಪ್ರಿಯಕರನು ತನ್ನನ್ನು ನೋಡಲು ಬರಲಿಲ್ಲವಲ್ಲಾ ಎಂಬ ಚಿಂತೆಯು ಅಂಬುಜಳನ್ನು ವೇಧಿಸಿತು. ಆದರೂ ಅವಳು "ಇಲ್ಲಮ್ಮಾ, ಅವರಿಗೆ ಏನಾದರೂ ಮುಖ್ಯವಾದ ಕೆಲಸವಿರಬಹುದು. ಇಲ್ಲದೇ ಹೋದರೆ ಅವರು ಹೀಗೆ ಮಾಡುವವರೇ ಅಲ್ಲ." ಎಂದಳು.

"ಸುಂದರನನ್ನು ನಾನೇನೂ ಹೀಯಾಳಿಸಲಿಲ್ಲ. ಅದಿರಲಿ ನಿನಗೆ ನೋವು ಹೇಗಿದೆ. ಈ ಹತ್ತು ದಿವಸವೂ ನಾನು ಬೇಡದ ದೈವವಿಲ್ಲ." ಎಂದು ವಾತ್ಸಲ್ಯದಿಂದ ನುಡಿದಳು.

"ಮೈಯಲ್ಲಿ ನೋವೇನೂ ಇಲ್ಲ ಅಮ್ಮಾ. ಕಣ್ಣುಗಳು ಮಾತ್ರ ಬಹಳ ನೋಯುತ್ತವೆ "

'ಕಂಣುಗಳು' ಎಂದೊಡನೆ ರುಕ್ಮಿಣಿಗೆ ಸಂಕಟವಾಯಿತು. ಪ್ರಾಣಕ್ಕೆ ಭಯವಿಲ್ಲದಿದ್ದರೂ ಕಣ್ಣುಗಳು ಬರುವುದು ಅಸಂಭವ" ಎಂದು ವೈದ್ಯರು ಹೇಳಿದ ಮಾತು ಜ್ಞಾಪಕಕ್ಕೆ ಬಂತು. ತಾಯಿಯ ಮೌನವನ್ನು ನೋಡಿ ಅಂಬುಜಾ "ನನ್ನ ಕಣ್ಣುಗಳು ಬರುವದಿಲ್ಲವೇ ಅಮ್ಮಾ, ವೈದ್ಯರು ಏನು ಹೇಳಿದರು!"

''ಇಲ್ಲವಮ್ಮಾ ನಿನಗೆ ಕಣ್ಣುಗಳು ಬರುತ್ತವಮ್ಮಾ; ಕಣ್ಣು ಹೋದರೂ ಸುಂದರ ನಿನ್ನ ಕೈ ಬಿಡುವದಿಲ್ಲ."

"ನನಗೆ ಆದರ ಭಯವಿಲ್ಲ ಅಮ್ಮಾ. ಅವರು ನನಗೆ ವಾಗ್ದಾನ ಮಾಡಿದ್ದಾರೆ. ನಮ್ಮದು 'ದೈವೀಪ್ರೇಮ' " ಎಂದದ್ದು ಕೇಳಿ ರುಕ್ಮಿಣಿ ಮಾರುತ್ತರ ಕೊಡಲಾರದೇ ಹೋದಳು

ಒಂದು ವಾರವಾಯಿತು. ವೈದ್ಯರು ಅವಳ ಕಣ್ಣಿನ ಕಟ್ಟನ್ನು ಬಿಚ್ಚಿಬಿಟ್ಟರು. ಅವರು ಹೇಳಿದಂತೆ ಅವಳ ನೀಲೋತ್ಪಲವಾದ ನಯನಗಳು ಪ್ರಕಾಶವನ್ನು ಕಳೆದುಕೊಂಡಿದ್ದವು. ಇನ್ನು ಅವಳ ನೃತ್ಯವೆಲ್ಲಿ? ಆ ನಯನಗಳು ಹೊರಳಿ ಮೋಹಗೊಳಿಸುವ ಮರ್ಮಸೂತ್ರವೆಲ್ಲಿ? ಅಹುದು ಅವಳು ಕುರುಡಿಯಾದಳು, ಪದ್ಮನಯನಳು ಕುರೂಪಿಯಾದಳು.

ರುಕ್ಮಿಣಿ ಇದನ್ನು ಕಂಡು ಅತಿ ದುಃಖಗೊಂಡಳು. ಆದರೆ ಅಂಬುಜಳು ಸ್ವಲ್ಪವಾದರೂ ಚಂಚಲಳಾಗಲಿಲ್ಲ ಅವಳಿಗೆ ಸುಂದರನು ತನ್ನ ಕೈಬಿಡುವುದಿಲ್ಲವೆಂದು ಕೊಟ್ಟ ಭಾಷೆಯಲ್ಲಿ ನಂಬಿಕೆಯಿದ್ದುದರಿಂದ ಆವಳಿಗೇಕೆ ಚಿಂತೆ?

ದಿನಗಳು ತಿಂಗಳುಗಳಾದವು. ಅಂಬುಜಳಿಗೆ ಎಂದಾದರೂ ಸುಂದರ ಬಂದೇ ಬರುವನು. ಎಂಬ ದೃಢನಂಬಿಕೆ ಇತ್ತು. ಕಡೆಗೆ ಆ ದಿನವೂ ಬಂದಿತು. ಅಂದು ಆಷಾಡದ ಒಂದು ಶುಕ್ರವಾರ ಅಂಬುಜಾ ಸ್ನಾನಮಾಡಿ ಪೂಜಾಗೃಹದಲ್ಲಿ ಆಂಬಿಕೆಯನ್ನು ಪ್ರಾರ್ಥಿಸುತ್ತಿದ್ದಳು. ರುಕ್ಮಿಣಿ ಅಲ್ಲಿಯೇ ಇದ್ದ ತೂಗುಮಣೆಯ ಮೇಲೆ ಕುಳಿತಿದ್ದಳು.

ಹೊರಗೆ ಗಾಡಿ ನಿಂತಿತು. ''ಅತ್ತೆ" ಎಂದು ಕರೆಯುತ್ತ ಸುಂದರ ಒಳಗೆ ಬಂದ.

"ಬಾ! ಸುಂದರಾ. .. ..."

"ತಂದೆಯವರಿಗೆ ಮೈಯಲ್ಲಿ ಸ್ವಸ್ಥವಿಲ್ಲವೆಂದು ತಾರುಬಂತು. ಆದ್ದರಿಂದ ಹೋದೆ ಅಂಬುಜಳಿಗೆ ಈಗ ಹೇಗಿದೆ'' ಎಂದು ಸುಂದರ ಕೇಳಿದ.

"ಅಂಬುಜಳಿಗೆ ಸೌಖ್ಯವಾಗಿದೆ ಆದರೆ ಅವಳು ತನ್ನ ದೃಷ್ಟಿಯನ್ನು ಕಳೆದುಕೊಂಡಿರುವಳು" ಬಹು ದುಃಖದಿಂದ ಈ ಮಾತುಗಳು ಹೊರಬಂದವು.

"ನನಗಾಗಲೇ ವೈದ್ಯರು ಹೇಳಿದ್ದರು. ಚಿಂತಿಸಿ ಫಲವೇನು? ಅವಳು ಬಹಳ ವ್ಯಸನಪಡುತ್ತಾಳೆಯೇ?''

"ಇಲ್ಲ, ನನಗೇ ಅಧಿಕ ಚಿಂತೆ; ಅವಳಿಗೇನೂ ಇಲ್ಲ. ನೀನವಳನ್ನು ಮದುವೆಮಾಡಿಕೊಳ್ಳುತ್ತೀನೆಂಬ ದೃಢ ನಂಬಿಕೆಯಿಂದಿದ್ದಾಳೆ. ಅಂದ ಮೇಲೆ ಅವಳಿಗೇಕೆ ಚಿಂತೆ?'' ರುಕ್ಮಿಣಿ ಮಾತ್ರ ನಿಜವಾಗಿಯೂ ಚಿಂತೆಯಿಂದಿದ್ದಳು.

ಅವಳ ಮಾತುಗಳನ್ನು ಕೇಳಿ ಸುಂದರ ಆಶ್ಚರ್ಯದಿಂದ ಮೇಲೆದ್ದ, "ಏನತ್ತೆ ಆಡವಾಡುತ್ತಿರಾ ಇನ್ನೂ ಆ ನಂಬಿಕೆಯೊಂದಿಗೆ ಇದ್ದಾಳೆಯೋ ಅಂಬುಜಾ? ನಿಜವಾಗಿಯೂ ಹೇಳುತ್ತೀರಾ ಅತ್ತೆ?"

"ಏನು ಸುಂದರಾ, ಇದರಲ್ಲಿ ಆಟವೇನಿದೆ? ನಾವು ಮೊದಲೇ ಮಾತನಾಡಿಲ್ಲವೇ ಮುಹೂರ್ತ ಕೂಡ ನಿಶ್ಚಯಿಸಿದ್ದೆವಲ್ಲಾ ''

"ಆಗ ಮುಹೂರ್ತವಿಟ್ಟಿದ್ದರೆ, ಆಗಿನಂತೆ ಈಗಿದ್ದಾಳೆಯೇ ಅತ್ತೆ ಅಂಬುಜಾ ಅವಳ ನಯನಗಳಲ್ಲವೇ ನನ್ನನ್ನಾಕರ್ಷಿಸಿದ್ದವು ಅವು ಇಲ್ಲದಿರುವಾಗ ನಾನವಳನ್ನು ಮದುವೆಯಾಗಲು ಏನು ಹುಚ್ಚನೇ?" ಎಂದು ಕೋಪದಿಂದ ನುಡಿದ ಸುಂದರ.

ಅಲ್ಲಿಯವರೆಗೂ ಅಡಗಿಸಿಕೊಂಡಿದ್ದ ಕೋಪವನ್ನು ಇನ್ನು ತಡೆಯಲಾರದೆ ಹೋದಳು ರುಕ್ಮಿಣಿ. "ನನಗಾಗಲೇ ತಿಳಿದಿತ್ತು, ನಿನ್ನ ಯೋಗ್ಯತೆ; ಗಂಡುಹುಡುಗರನ್ನು ನಂಬಬಾರದೆಂದು ನಾನಾಗಲೇ ಅವಳಿಗೆ ಹೇಳಿದೆ. ಅವಳಿಗೆ ಹೇಳಿ ಏನು ಪ್ರಯೋಜನ, ನನ್ನ ಬುದ್ಧಿಗೆ ಏನು ಹೇಳಲಿ? ನೀನೀ ಮನೆಯಲ್ಲಿ ಯಾವ ಕಾಲದಲ್ಲಿ ಕಾಲಿಟ್ಟೆಯೋ ನನ್ನ ಮಗಳ ಕಣ್ಣು ಹೋಗಿಬಿಟ್ಟವು. ಹೋಗು ಈ ಕ್ಷಣ ಹೊರಡು. ಇನ್ನು ಮುಂದೆ ಇಲ್ಲಿಗೆ ಬರಬೇಡ ಹೊರಟು ಹೋಗು" ಎಂದು ನುಡಿದಳು. ಸುಂದರನೂ ಅಲ್ಲಿ ನಿಲ್ಲಲಿಲ್ಲ.

ಇದನ್ನೆಲ್ಲವನ್ನೂ ಪೂಜಾಗೃಹದಲ್ಲಿ ಕುಳಿತು ಕೇಳುತ್ತಲಿದ್ದ ಅಂಬುಜಳಿಗೆ ಲೋಕವೇ ತಿರುಗುತ್ತಿರುವಂತೆ ತೋರಿತು. ಆದರೆ .......ಕೊನೆಗೆ........ ನಂಬಿಕೆಗೆ ದ್ರೋಹವನ್ನೆ ಬಗೆದ ಸುಂದರನನ್ನು ನೋಡಲು ಕಣ್ಣುಗಳಿಲ್ಲವಲ್ಲಾ ಎಂದು ಸಂತೋಷಿಸಿದಳು.

ಕಾಲಚಕ್ರವು ತಿರುಗಿ ಆರು ವರುಷಗಳು ಸಂದಿಹೋದವು. ಈ ದಿನ ಮತ್ತೆ ಮೋಹನರಾಗವನ್ನು ಕೇಳಿದೊಡನೆಯೇ ಅಂಬುಜಳಿಗೆ ಹಳೆಯ ನೆನಪುಗಳು ಬರಲಾರಂಭಿಸಿದವು.

''ಹನ್ನೆರಡು ಹೊಡೆದರೂ ಇನ್ನೂ ವರಾಂಡದಲ್ಲಿ ಏನು ಮಾಡುತ್ತಿದ್ದಿ ಅಂಬುಜ" ಎಂದು ಕೇಳುತ್ತ ರುಕ್ಮಿಣಿ ಅಂಬುಜಳ ಬಳಿ ಬಂದು ನಿಂತಾಗ ದೂರದಲ್ಲಿದ್ದ ಮೆರವಣಿಗೆ ಅವರ ಮನೆಯ ಮುಂದೆ ಬಂದು ನಿಂತಿತು ನಾಗಸ್ವರದವನು ಮೋಹನರಾಗವನ್ನಿನ್ನೂ ಬಾರಿಸುತ್ತಲಿದ್ದ.

"ಯಾವ ಮೆರವಣಿಗೆ ಇದು?" ಎಂದು ಹೊರಬಂದು ನೋಡಿದಳು ರುಕ್ಮಿಣಿ. ನಾಗಸ್ವರ ಬಾರಿಸುವವನನ್ನು ಕಂಡು ದಿಙ್ಮೂಢಳಾಗಿ ನಿಂತಳು.

"ಅಮ್ಮಾ, ಈ ಮೋಹನರಾಗವು ಸುಂದರನ ಮೋಹನರಾಗದಂತಿದೆಯಲ್ಲಮ್ಮಾ'' ಎಂದು ಕೇಳಿದ ಮಗಳಿಗೆ ಏನೂ ಉತ್ತರ ಕೊಡಲಾರದೆ ರುಕ್ಮಿಣಿ ಅಂಬುಜಳ ಕಣ್ಣುಗಳ ಕಡೆ ನೋಡಿ ಕಣ್ಣೀರಿಟ್ಟಳು.





# ಜಯುಳ ಓಲೆಗಳು



**ಪ್ರಿಯ ಗೆಳತಿ ಹೇಮಾ,**

ನಿನ್ನೆ, ನಾವು ನಿಲ್ದಾಣಕ್ಕೆ ಹೊರಟಾಗ ನೀನು ನಿಮ್ಮ ಮನೆಯ ಬಾಗಿಲಲ್ಲೇ ನಿಂತಿದ್ದಿ. ನನ್ನನ್ನು ಗಾಡಿಯಲ್ಲಿ ಕಂಡೊಡನೆ ನಿನ್ನ ಕಣ್ಣುಗಳಲ್ಲಿ ನೀರುಕ್ಕಿ ಬಂದುದನ್ನು ಕಂಡು ನನ್ನ ಮನಸ್ಸು ಕಾತರಗೊಂಡಿತು. ಹೆಣ್ಣು ಹೊಸದಾಗಿ ಗಂಡನೊಡನೆ ಮೊದಲನೆಯ ಬಾರಿ ಅವನ ಮನೆಗೆ ಹೋಗುವಾಗ ಅನೇಕ ಸುಖದ ಸ್ವಪ್ನಗಳನ್ನು ಕಂಡು ತನ್ನವರನ್ನೇ ಮರೆಯುತ್ತಾಳೆಂದು ಎಲ್ಲರೂ ತಿಳಿಯುತ್ತಾರೆ. ಆದರೆ ಅಂದು ನನ್ನ ಮನದಲ್ಲಿಯ ಭಾರವನ್ನು ತಿಳಿದುಕೊಂಡ ನೀನು ಈ ರೀತಿಯಾಗಿ ಯೋಚಿಸಿಲ್ಲವೆಂದು ನೆನೆಯುತ್ತೇನೆ.

ನೀನೂ ನಾನು ಶಾಲೆಯ ಬಾಲಕಿಯರಾಗಿರುವಾಗ ಎಷ್ಟೋ ಸಲ ಕಾದಾಡಿದ್ದೇವೆ. ಮುಖ್ಯವಾಗಿ ಉಪ್ಪರಿಗೆ ಮನೆಯ ಆನಂದನು ನನ್ನಲ್ಲಿ ಒಂದು ವಿಧವಾದ ವಾತ್ಸಲ್ಯದ ಸಲುಗೆಯನ್ನು ತೋರುವುದನ್ನು ಕಂಡು ನೀನು ನನ್ನನ್ನು ಹಾಸ್ಯಮಾಡಿದ್ದಿ. "ಅವನು ಬುದ್ಧಿಶಾಲಿ, ಸುಂದರ; ಒಳ್ಳೆಯ ಮನಸ್ಸು, ವಿವೇಕವೂ, ಧಾರಳಬುದ್ಧಿಯೂ ಅವನಲ್ಲಿದೆ" ಎಂದು ನಾನು ಅವನನ್ನು ವರ್ಣಿಸಿದಾಗ ನೀನು ಚಪ್ಪಾಳೆ ತಟ್ಟಿ ಚೇಷ್ಟೆ ಮಾಡುತ್ತಿದ್ದಿ.

ಅಹುದು, ಅವೆಲ್ಲವೂ–ಹದಿನೈದು ವರುಷಗಳ ಹಿಂದಿನ ಮಾತು. ಆದರೆ ಬಿಡಲು ಮನಸ್ಸು ಬಂದರಲ್ಲವೇ? ಏಕೆ? ನಿನಗೆ ಗೊತ್ತಿದೆ ಆ ವಯಸ್ಸಿನಲ್ಲಿ ನಾನು ಆನಂದನೊಂದಿಗೆ ಕೂಡಿ ಆಡಿದುದನ್ನು ನೀನು ಕಂಡಿರುವಿ. ನಮ್ಮೀರ್ವರಲ್ಲಿ ಪ್ರೇಮವುಂಟಾಗಿದೆ ಎಂಬುದನ್ನು ನೀನರಿತಿರುವಿ. ಆದರೆ ನಾನೆಂತಹ ಹುಚ್ಚಿ. ನಾನೆಲ್ಲಿ? ಆನಂದನೆಲ್ಲಿ? ನಿಲುಕಲಾರದ ವಸ್ತುವಿಗೆ ಆಶಿಸಿದ ನರಿಯಂತೆ ಆಗಿದೆ ನನ್ನ ಅವಸ್ಥೆ.

ನಿನಗೇ ತಿಳಿದಿದೆ. ನನ್ನ ತಂದೆಯವರು ಓರ್ವ ಹಳ್ಳಿಯ ಶ್ಯಾನುಭೋಗರೆಂದು. ಅವರು ಬಡವರು; ಪರ್ವತದಂತೆ ಬೆಳೆದು ನಿಂತ ನನ್ನನ್ನು ನೋಡಿ ತಂದೆಯವರು ಕಣ್ಣೀರು ಬಿಡುತ್ತಿರುವುದನ್ನು ನೋಡಿದೊಡನೆಯೇ ನನ್ನನ್ನು ಯಾರೋ ಎಚ್ಚರಿಸಿದಂತಾಯಿತು. "ಜಯಾ ಹೀಗೆಯೇ ಇದ್ದು

ಬಿಡುವಳೋ ನಾನೇನೋ ಹಾಗೆಯೇ ವರ ನಿಶ್ಚಯಿಸದೇ ಇದ್ದೇನೆ. ವರ ನಾದರೂ ಹೇಗೆ ಸಿಗಬೇಕು? ಹೇಗಾದರೂ ಊರಿನಲ್ಲಿರುವ ವರಗಳ ಬೆಲೆ ಗಳನ್ನು ನೋಡಿದರೆ ಅವಳ ಮದುವೆ ಹೇಗೆ ಮಾಡುತ್ತೇನೋ ತಿಳಿಯ ದಾಗಿದೆ" ಎಂದು ತಾಯಿಯವರೊಡನೆ ಅವರು ಹೇಳುತ್ತಲಿದ್ದ ಮಾತು ಗಳನ್ನು ನಾನು ಅನೇಕ ಸಲ ಕೇಳಿ ಸಂಕಟಪಟ್ಟಿದ್ದೇನೆ.

ಏಳು ವರುಷದವರಿರುವಾಗ, ಆಟದಲ್ಲಿ ಆನಂದನು ನನಗೆ ಮಾಲೆ ಇಡುತ್ತಿದ್ದುದು ನೀನರಿತಿದ್ದೆ. ಅವನು ಹಾಗೆ ಆಟಗಳಲ್ಲಿ ನನ್ನನ್ನು ಹೆಂಡತಿ ಯಂತೆ ಕರೆದು ಆದರಂತೆ ವರ್ತಿಸಿದುದನ್ನು, ಮದುವೆಯ ವಯಸ್ಸು ಆದ ಮೇಲೆ ನನ್ನಲ್ಲಿ ಆ ಭಾವನೆಗಳು ನನ್ನೆದೆ ಕಲಕಿದವು. ಆದರೆ ಏನುಮಾಡಲಿ?

ಆನಂದನನ್ನು ನೆನೆದು ಈಗೇನು ಪ್ರಯೋಜನ? ಅವನಿಗೆ ನಾನು ಪರಸ್ತ್ರೀ. ಎಂದು ನೀನು ತಿಳಿಯಬಹುದಲ್ಲವೇ? ನಿಜ. ಹೇಗೊ ನನ್ನ ಮದುವೆಯನ್ನು ನಮ್ಮ ತಂದೆಯವರು ಮುಗಿಸಿದರು ಅವರ ತಲೆಯ ಮೇಲಿದ್ದ ಭಾರವು ಹೇಗೋ ಇಳಿಯಿತು.

ನಾನು ಇನ್ನೂ ಆನಂದನನ್ನೇ ಸ್ಮರಿಸುತ್ತಲಿದ್ದರೆ ಊರ ಜನ ನಕ್ಕಾರು. ಅದೇಕೆ ನಾನವನನ್ನು ಮರೆತು ಅನೇಕ ವರುಷಗಳಾಗಿ ಬಿಟ್ಟವೆ. ಹದಿನೈದು ವರುಷಗಳ ಹಿಂದೆ ಅವನ ಶ್ರೀಮಂತ ಸೋದರ ಮಾವನು ಬಂದು ಅವನನ್ನು ದತ್ತ ಸ್ವೀಕಾರ ಮಾಡಿಕೊಂಡು ಪುಣೆಗೆ ಕರೆದುಕೊಂಡು ಹೋದಾಗಲೇ ನಾನವನನ್ನು ಮರೆತು ಬಿಡಲು ಯತ್ನಿಸಿದೆ. ಈ ನಡುವೆ, ಒಂದು ದಿನ ವಾದರೂ ಆನಂದನನ್ನು ಸ್ಮರಿಸಿಲ್ಲ.

ನನ್ನ ಪತಿದೇವರೊಂದಿಗೆ ಈಗ ಮುಂಬಯಿಗೆ ತೆರಳುವ ಮಾರ್ಗದಲ್ಲಿ ಪುಣೆಗೆ ಬಂದಿದ್ದೇನೆ. ನೋಡಿದರೆ ಹುತ್ತಿನಲ್ಲಿಯ ಹಾವಂತೆ ಶಾಂತರೀತಿ ಯಿಂದ ಇದ್ದ ನನ್ನ ಇವರು ಓರ್ವ ಹಿತವಂಚಕರೆಂದು ನಿನ್ನೆ ತಿಳಿಯಪಡಿ ಸಿದರು. ಊರಲ್ಲಿದ್ದಾಗ ತಮಗೆ ಮದುವೆಗಾಗಿ ಒಂದು ತಿಂಗಳ ರಜಾ ತೆಗೆದುಕೊಂಡಿದ್ದೇನೆಂದು ಹೇಳಿದ್ದರಲ್ಲಾ ಅದೆಲ್ಲವೂ ಶುದ್ಧ ಸುಳ್ಳು. ಇವರಿಗೆ ಹದಿನೈದು ದಿನಗಳ ರಜಾ ಕೊಟ್ಟಿದ್ದರಂತೆ. ಇವರು ಮತ್ತೊಂದು ಹತ್ತು ದಿನ ಕೇಳಿದಾಗ–"ಕೆಲಸವು ಅತಿ ಭರದಿಂದ ಸಾಗಿರುವಾಗ, ಸಕಾರಣವಿಲ್ಲದೆ, ರಜಾ ಅಧಿಕರಿಸುತ್ತಿರುವ ನಿಮ್ಮನ್ನು ಕೆಲಸದಿಂದ ತೆಗೆದು ಹಾಕಬಾರದೇಕೆ" ಎಂದು ಆಫೀಸಿನ ಮ್ಯಾನೇಜರರು ಕಾಗದ ಬರೆದಿದ್ದರು. ಆದ್ದರಿಂದಲೇ ಅವರು ನಿನ್ನೆಯ ದಿನ ಅಷ್ಟು ಗಡಿಬಿಡಿಯಿಂದ ಹೊರಟಿದ್ದುದು.

ಈ ಸಮಾಚಾರವನ್ನು ನಿನ್ನೆ ನನ್ನೊಂದಿಗೆ ಹೇಳಿ ಆ ಮ್ಯಾನೇಜರರನ್ನು ಬಾಯಿಗೆ ಬಂದ ಹಾಗೆ ಬೈದರು. ಅವನು ದಯಾದಾಕ್ಷಿಣ್ಯವಿಲ್ಲದ ಪಾಪಿ. ಕಲಕತ್ತೆಯಿಂದ ಮುಂಬಯಿಗೆ ಬಂದಂದಿನಿಂದ ಆಫೀಸಿನಲ್ಲಿ ಎಲ್ಲರಿಗೂ ಅವನನ್ನು ಕಂಡರಾಗುವುದಿಲ್ಲವಂತೆ. ಹೀಗೆ ಏನೇನೋ ಹೇಳಿದರು. ಇದು ಹೋಗಲಿ ಹೇಮಾ. ಅವರು ನನ್ನೊಂದಿಗೆ ಅಂತರಂಗದಲ್ಲಿ ಹೇಳಿದ ಸುದ್ದಿ ನನ್ನ ಮನಸ್ಸನ್ನು ಅತಿಯಾಗಿ ಬಾಧಿಸುತ್ತಲಿದೆ. ಮದುವೆಗೆ ಮುಂಚಿತ ವಾಗಿಯೇ ಅದು ನನ್ನ ತಂದೆ ತಾಯಿಗಳ ಬಳಿ ಹೇಳಿದ್ದರಂತೆ ಆದರೆ ನಾನು ಬಹಳ ಕಷ್ಟಪಡುವೆನೆಂದು ನನ್ನೊಂದಿಗೆ ಯಾರೂ ಹೇಳಿಲ್ಲವಂತೆ. ಇವರಿಗೆ ಮೊದಲನೆಯ ಹೆಂಡತಿಯಲ್ಲಿ ಆದ ಎರಡು ಮಕ್ಕಳನ್ನು ಮುಂಬಯಿ ಯಲ್ಲಿಯೇ ಬಿಟ್ಟಿರುವರಂತೆ. ಈ ದಿನ ಬೆಳಗ್ಗೆ ನನ್ನೊಡನೆ ಗೋಪ್ಯವಾಗಿ ಈ ಮಾತನ್ನು ತಿಳಿಸಿದರು. ನನ್ನ ತಲೆಯ ಮೇಲೆ ಸಿಡಿಲು ಬಿದ್ದಂತಾ ಯಿತು ಹೇಮಾ!

ಆದರೆ ಇನ್ನು ಚಿಂತಿಸಿ ಏನು ಫಲ? ಮಾಡಿದ್ದುಣ್ಣೊ ಮಹರಾಯಾ ಎಂದು ಸುಮ್ಮನೇ ಹೇಳುವವರೇ ಹೆಚ್ಚು.

—ಜಯಾ

× × × × × × × × ×

**ನನ್ನ ಪ್ರೀತಿಯ ಹೇಮಾ,**

ನೀನು ಮಾರುತ್ತರ ಬರೆಯಲು ಕಷ್ಟವಾಗಿ ತತ್ತರಿಸುತ್ತಿರಬಹುದು? ನಾನಾದರೂ ಏನು ಮಾಡಲಿ? ಒಂದು ದಿನ ಇದ್ದ ಸ್ಥಳದಲ್ಲಿ ಮತ್ತೊಂದು ದಿನವಿಲ್ಲವೆಂದಮೇಲೆ, ನಾನು ಯಾವ ವಿಳಾಸವನ್ನು ನಿನಗೆ ಬರೆಯಲಿ?

ಇಂದು ಮುಂಜಾನೆ ಹನ್ನೆರಡು ಗಂಟೆಗೆ ನಾವು ಮುಂಬಯಿ ಸೇರಿದೆವು. ಬಂದ ಒಡನೆಯೇ, ಯಾರೋ ಸ್ನೇಹಿತರ ಬಳಿ ಹೋಗಿ ಆಫೀಸ ವಿಚಾರ ಗಳನ್ನು ಕೇಳಿಕೊಂಡು ಬಂದರು. ಮುಖದಲ್ಲಿ ಹೆಚ್ಚಿನ ಸಿಟ್ಟಿನ ಲಕ್ಷಣ ಗಳಿದ್ದವು. ಆಫೀಸಿನಲ್ಲಿ ಇವರಿಗೆಲ್ಲ ಪ್ರತಿಕೂಲವೆಂದು ನಾನೇನರಿಯಬಲ್ಲೆ? ನಾನು ಸುಮ್ಮನಿದ್ದೆ.

ಆಫೀಸಿನ ಮ್ಯಾನೇಜರನನ್ನು ತೆರಪಿಲ್ಲದೆ ಬೈಯ್ಯುತ್ತಲಿದ್ದರು. ಅವ ನಾದರೂ ಈ ಪರಿ ಹೊಟ್ಟೆಯುರಿಸಿಕೊಳ್ಳಬೇಕೇಕೆ? ಇವರು ಕೆಲಸದಲ್ಲಿ ಸೇರಿ ಹತ್ತು ವರುಷಗಳಾಗಿವೆಯಂತೆ. ವಯಸ್ಸೂ, ಕೆಲಸದ ಅವಧಿಯೂ ಅಧಿ ಕರಿಸುತ್ತಿರುವುದೇ ವಿನಹ, ಸಂಬಳವು ಹೆಚ್ಚಿಲ್ಲ. ಇವರ ಹೇಳಿಕೆಯಿಂದ

ನನಗೆ ಒಂದು ವಿಷಯ ಮಾತ್ರ ಹೊಳೆಯಿತು. ಮೇಲಧಿಕಾರಿಗಳು, ಸಂಸಾರದ ಅನುಭವ ಉಳ್ಳವರೂ, ಹೆಂಡರು ಮಕ್ಕಳುಳ್ಳವರೂ, ಆಗಿಯೆ ಇರಬೇಕಾದುದು ಅವಶ್ಯಕವೆಂಬುದನ್ನು ತಿಳಿದುಕೊಂಡೆ. ಈ ಹೊಸ ಮ್ಯಾನೇಜರರು, ಇನ್ನೂ ಬ್ರಹ್ಮಚಾರಿಯಂತೆ. ಆದ್ದರಿಂದ ಅವರಿಗೆ ದಯೆಯೇ ಶೂನ್ಯ.

ಹೊಟ್ಟೆಯಲ್ಲಿ ಹುಳಿ ಹಿಂಡಿಕೊಂಡು ಕುಳಿತಿದ್ದೇನೆ. ಅವರಿಂದು ಆಫೀಸಿಗೆ ಹೋಗಲಿಲ್ಲ. ಸಂಜೆ ಇವರು ನನ್ನನ್ನೂ ಮಕ್ಕಳನ್ನೂ ಕರೆದುಕೊಂಡು ಸಿನಿಮಾಕ್ಕೆ ಹೋಗಲು ನಿಶ್ಚಯಿಸಿದ್ದಾರೆ.

ಹೇಮಾ, ಮರೆತುಬಿಟ್ಟದ್ದೆ. ಮೊದಲನೆಯುವಳ ಮಕ್ಕಳ ಬಗ್ಗೆ ಏನೂ ಬರೆದಿಲ್ಲ. ಕೇಳು ಸೀತಾ, ಸತೀಶರು ನನ್ನನ್ನು ಯಾವಾಗಲೂ, "ಅಮ್ಮಾ, ಅಮ್ಮಾ'' ಎಂದು ಸುತ್ತುಗಟ್ಟಿದ್ದಾರೆ. ನನಗೆ ಅವರನ್ನು ಕಂಡರೆ ಅತಿ ಆದರ, ತುಂಬ ಪ್ರೇಮ ಹೇಮಾ, ಮಿಕ್ಕಿದ್ದು ನಾಳೆ ಬರೆಯುತ್ತೇನೆ.

— ಜಯಾ

× × ×

**ಮುದ್ದು ಹೇಮಾ,**

ನಿನ್ನೆ ಸಂಜೆ ಮೂರು ಗಂಟೆಗೇ ನಮ್ಮನ್ನು ಕರೆದುಕೊಂಡು ಹೊರಟರು. ಮಕ್ಕಳು ಮುಂಬಯಿ ಪಟ್ಟಣವನ್ನು ವರ್ಣಿಸುತ್ತ ಬಂದರು. ಹಳ್ಳಿಯಲ್ಲಿ ಮನೆಯ ಹೊಸ್ತಿಲನ್ನು ದಾಟಿ ಅರಿಯದ ನನಗೆ ಈ ಊರು ದೇವಲೋಕದಂತಿದೆ.

ಕೆಲವು ಮುಖ್ಯ ಪ್ರದೇಶಗಳನ್ನು ನೋಡಿಬಿಟ್ಟು ಸಿನಿಮಾ ಥಿಯೇಟರಿಗೆ ಆರು ಗಂಟೆಯ ಸುಮಾರಿಗೆ ಬಂದು ಸೇರಿದೆವು. ನಮ್ಮನ್ನು ಒಳಗೆ ಕುಳ್ಳಿರಿಸಿ, ತಾವು ಹೊರಗೆ ಯಾರೊಡನೆಯೋ ದೇಶಾವರದ ನಗೆನಗುತ್ತ ಮಾತನಾಡುತ್ತ ನಿಂತರು ಕೆಲವು ಹೊತ್ತಿಗೇ ಅವರು ಒಳಗೆ ಬಂದರು. ಚಿತ್ರವು ಪ್ರಾರಂಭವಾಗಿತ್ತು.

ನನ್ನ ಪಕ್ಕದಲ್ಲಿ ಬಂದು ಕುಳಿತವರು, ಇತರರನ್ನೂ ನೋಡದೇ ಎತ್ತಿದ ಧ್ವನಿಯಲ್ಲಿ ಒದರಲಾರಂಭಿಸಿದರು. ಹೊರಗೆ ಅವರು ನನ್ನ ಪತಿಯೊಂದಿಗೆ ಮಾತನಾಡುತ್ತ ನಿಂತವರೇ ಅವರ ಆಫೀಸಿನ ಮ್ಯಾನೇಜರನಂತೆ. ಅವನು ಸಿನಿಮಾ ನೋಡಲು ಬಂದಿದ್ದನಂತೆ. ಅವನಾದರೋ ಇವರನ್ನು ಕಂಡರೆ

ಆಗುವುದಿಲ್ಲವೆಂದಿರುವವನಲ್ಲಾ, ಅವನಿಗೆ ನನ್ನನ್ನು ತೋರಿಸಿ, "ಅದೋ ಇರು ವಳೇ, ಅವಳೇ ನನ್ನ ಎರಡನೆಯ ಹೆಂಡತಿ–ಜಯಾ" ಎಂದು ಇವರೇಕೆ ಹೇಳಬೇಕು? ಆಫೀಸಿನಲ್ಲಿ ಕೆಲಸಕ್ಕೆ ಲಾಟರೀ ಆಗಿದೆ. ಅಂತಹದರಲ್ಲಿ ಇವನು ಹೊಸ ಹೆಂಡತಿಯೊಂದಿಗೆ ಚೈನಿ ಮಾಡುತ್ತಲಿದ್ದಾನೆ ಎಂದು ತಿಳಿಯುವು ದಿಲ್ಲವೇ? ನೀನೇ ಹೇಳು? ಇವರಿಗೇನೂ ತಿಳಿಯದು ಶುದ್ಧ ಪೆದ್ದು ಹೇಮಾ.

ನನಗೆ ಸಿನಿಮಾ ನೋಡುವ ಇಚ್ಛೆ ಇರಲಿಲ್ಲ. ಮನಸ್ಸು ನೆಮ್ಮದಿ ಯಾಗಿರಲಿಲ್ಲ. ರಾತ್ರಿಯೆಲ್ಲವೂ ನನಗೆ ಅವರ ಚಿಂತೆಯೇ. ಎಲ್ಲಿ ನೌಕರಿ ಕಳೆದುಕೊಂಡು ಬಂದು ಕುಳಿತುಕೊಳ್ಳುವರೋ ಎಂಬ ಚಿಂತೆ ನಿರುದ್ಯೋಗದ ಚಿಂತೆ ನನ್ನನ್ನು ಕಾಡುತ್ತಿತ್ತು.

ಬೆಳಿಗ್ಗೆ ಹತ್ತು ಗಂಟೆಗೆ ಅವರು ಆಫೀಸಿಗೆ ಹೊರಟರು, ಹೇಮಾ. ದೇವರ ಪಟದ ಮುಂದೆ ನಿಂತು ಕೈಮುಗಿದು ಗಲ್ಲಬಡಿದುಕೊಂಡು ನನ್ನೆದುರು ಬಂದು "ಜಯಾ, ನಾನು ಬರಲೇ. ಎಲ್ಲವೂ ಒಳ್ಳೆಯದಾಗಿ ಮುಗಿದರೆ ಸರಿ. ಇಲ್ಲವಾದರೆ" ಎಂದು ಏನೋ ಹೇಳಿ ಹೊರಟುಹೋದರು. ನನ್ನ ಅದೃಷ್ಟವನ್ನು ನೆನೆದು ಚಿಂತಿಸುತ್ತ ಕುಳಿತುಬಿಟ್ಟೆ.

ಬಹುಶಃ ಇದೆಲ್ಲವೂ ಮುಗಿದ ಮೇಲೆ ನಾನು ಬರೆಯಲಿರುವ ನಾಳಿನ ಪತ್ರದಲ್ಲಿ ನನ್ನ ಭಾವೀ ಜೀವನದ ನಿರ್ಣಯ ತಿಳಿಯಬಹುದು.

—ಜಯಾ

× × ×

ಒಲುಮೆಯ ಹೇಮಾ,

ಈ ಪತ್ರವನ್ನು ಬರೆಯಲು ನನಗೆ ಕುತೂಹಲ.

ನಿನ್ನೆ ಇವರು ಆಫೀಸಿಗೆ ಹೋದರೆಂದೆನಲ್ಲವೇ? ಅವರು ಸಂಜೆ ಆರು ಗಂಟೆಗಳಾಗಿಯೂ ತಿರುಗಿ ಬರಲಿಲ್ಲ. ನನ್ನ ಮನದಲ್ಲಿ ವೇದನೆ ಪ್ರಾರಂಭಿ ಸಿತು. ಏನು ಮಾಡಲಿ? ನನ್ನ ಈ ಸ್ಥಿತಿಯನ್ನರಿಯಲಾರದೆ, ಸತೀಶನು, "ಚಿಕ್ಕಮ್ಮಾ ಮಗ್ಗಲು ಮರಾರದಲ್ಲಿ ಅಪ್ಪ ಅವರ ಆಫೀಸಿನಲ್ಲಿ ಕೆಲಸ ಮಾಡುವ ಚಂದ್ರಶೇಖರರಾಯರು ಇದ್ದಾರೆ. ಅವರು ಬಂದರೇನೆಂದು ನೋಡಿಕೊಂಡು ಬರುತ್ತೇನೆ." ಎಂದು ಹೇಳಿ ಹೊರಟುಹೋದ.

ಸತೀಶನು ತಿರುಗಿಬಂದು ಏನು ಹೇಳುವನೋ ಎಂಬ ಭಯ ಬೇರೆ. ಅಷ್ಟರಲ್ಲಿ, ಸತೀಶನೊಡನೆ, ಓರ್ವ ಸ್ತ್ರೀಯೂ ಬರುವುದನ್ನು ಕಂಡೆನು. ಆಕೆ ಬಹುಶಃ ಚಂದ್ರಶೇಖರರಾಯರ ಹೆಂಡತಿ ಇರಬಹುದೆಂದು ತಿಳಿದೆ. ಸತೀಶ ನನ್ನನ್ನು ಕಂಡು "ಚಿಕ್ಕಮ್ಮ ಚಂದೂಮಾಮಿ ನಿನಗೊಂದು ಸಂತೋಷ ಸಮಾಚಾರ ಹೇಳಬೇಕೂ ಅಂತ ತಾನೇ ಬಂದಿದ್ದಾಳೆ ಅಮ್ಮಾ" ಎಂದು ಒದರುತ್ತ ಓಡಿಬಂದ. ಅವರು ಹತ್ತಿರ ಬಂದಂತೆಲ್ಲ ನನ್ನ ಉತ್ಸಾಹವೂ, ಭಯವೂ ಹೆಚ್ಚಾಗತೊಡಗಿದವು. ಕಾರಣ ಏನೆಂದು ತಿಳಿಯಲಿಲ್ಲ. ಕೆಡುಕೆನಿಸಿ, ಸುಖ ಕೋರಬೇಕಲ್ಲವೇ? ಹಿಂದುಮುಂದರಿಯದ ಆ ಸ್ತ್ರೀಯನ್ನು ಮನಸಾರೆ ಸ್ವಾಗತಿಸಿದೆ. ಬಹುದಿನಗಳು ಮುಂಬಯಿಯಲ್ಲಿದ್ದ ಹೆಣ್ಣಲ್ಲವೆ ಅವಳು? ನನ್ನ ಕೈ ಹಿಡಿದು ಕುಲುಕುತ್ತಾ, "ನೀವು ಬಹಳ ಅದೃಷ್ಟಶಾಲಿಗರು. ಬಂದೊಡನೆ ಮನೆಯವರಿಗೆ ದೊಡ್ಡ ಪದವಿ ತಂದುಕೊಟ್ಟಿರಿ ಆಫೀಸಿನ ಮ್ಯಾನೇಜರರು, ನಿಮ್ಮವರ ಪಗಾರ ಹೆಚ್ಚು ಮಾಡಿದ್ದಲ್ಲದೇ ತಮ್ಮ ಸ್ಥಳಕ್ಕೆ ಅವರನ್ನು ಆರಿಸಿ ಕಂಪನೀಗೆ ಬರೆದಿದ್ದರಂತೆ. ಆದರಂತೆ ಈಗಿನ ಮ್ಯಾನೇಜರರನ್ನು ದಿಲ್ಲಿಗೆ ವರ್ಗಾಯಿಸಿದ್ದಾರೆ. ಮತ್ತು ಅವರ ಸ್ಥಳದಲ್ಲಿ ನಿಮ್ಮವರನ್ನು ನಿಯಮಿಸುವಂತೆ ಆರ್ಡರು ಬಂದಿದೆಯಂತೆ. ನಿಮ್ಮವರು ಎಂಟು ಗಂಟೆಯ ಸುಮಾರಿಗೆ ಬರಲಿದ್ದಾರಂತೆ ನಿಮ್ಮನ್ನು ನಿಲ್ದಾಣಕ್ಕೆ ಹೊರಡಲು ಸಿದ್ಧರಾಗುವಂತೆ ಹೇಳಿಕಳುಹಿಸಿದ್ದಾರೆ ನೀವು ಹೊರಡುವಾಗ ನನಗೂ ಒಂದು ಕೂಗು ಹಾಕಿ. ಕೂಸು ಅಳುನಂತಿದೆ ಹೋಗುತ್ತೇನೆ" ಎಂದು ಒಂದೇ ಉಸುರಿನಲ್ಲಿ ಹೇಳಿ ಆ ತಾಯಿ ಹೊರಟು ಹೋದಳು.

ನನಗೆ ನಿಜವಾಗಿಯೂ ಆಶ್ಚರ್ಯವಾಯಿತು. ಇವರನ್ನು ಕಂಡರಾಗದ ಆ ಮೇನೇಜರನು ಇವರನ್ನು ತನ್ನ ಸ್ಥಳಕ್ಕೆ ಸಿಫಾರ್ಸು ಮಾಡಲು ಕಾರಣ ತಿಳಿಯದೆ ಚಿಂತೆಗೀಡಾದೆ. ಅಷ್ಟರಲ್ಲಿಯೇ ಹೊರಗೆ ಕಾರು ಬಂದು ನಿಂತ ಶಬ್ದವು ಕೇಳಿಸಿತು. ನನ್ನನ್ನರಿಯದೆ ಕಣ್ಣುಗಳಲ್ಲಿ ನಿಂತಿದ್ದ ನೀರ ಹನಿಯನ್ನೊರಿಸಿಕೊಂಡು—ಮಕ್ಕಳು ಮೊದಲು ಓಡಿಹೋಗಲು, ಅರಳಿದ ಮುಖದಿಂದ ಅವರನ್ನು ಎದುರುಗೊಂಡೆ.

ಆಕಸ್ಮಿಕವಾಗಿ ಬಂಗ ಸಂಪತ್ತನ್ನೂ, ಪದವಿಯನ್ನೂ ಕಂಡು ಸಂತೋಷಪಡುವುದು ಮನುಷ್ಯನ ಸಹಜ ಧರ್ಮ ಅಲ್ಲವೇ ಹೇಮಾ? ಅವರ ಮುಖದಲಿ ಅದಕ್ಕೆ ಮುಂದಾಗಿ ನಾನು ಅದೇ ಕೋಪ, ವೈರತ್ವ

ಚಿನ್ನಗಳನ್ನು ಕಂಡು ಅಂಜಿದೆ. ಹೋಗುವಾಗ ತಲೆಯ ಮೇಲೆ ಕಲ್ಲನ್ನೆತ್ತಿ ಹಾಕದೇ ಸತ್ಕಾರ್ಯವನ್ನು ಮಾಡಿ ಹೋದ ಮ್ಯಾನೇಜರರನ್ನು ನನ ಮನಸ್ಸು ಅಂತರಂಗದಲ್ಲಿಯೇ ಅಭಿನಂದಿಸಿತು.

ಕೊಟ್ಟ ಕಾಫಿಯನ್ನು ಕುಡಿದು ನನ್ನನ್ನು ನೋಡಿ "ಜಯಾ, ಹತ್ತೂ ವರೆಗೆ ನಾವು ಸ್ಟೇಶನ್ನಿನಲ್ಲಿರಬೇಕು. ನಮ್ಮ ಶತ್ರು ಒಂದೇ ಬಾರಿ ಈ ಊರು ಬಿಟ್ಟು ಹೋಗುತ್ತಲಿದ್ದಾನೆ. ಆಫೀಸಿನ ಸಾಂಪ್ರದಾಯದಂತೆ ಅವನನ್ನು ಬೀಳ್ಕೊಡಬೇಕು. ನೀನೂ ಹೊರಡಲು ಸಿದ್ಧಳಾಗಿರು" ಎಂದರು.

ಸಮಯಕ್ಕೆ ಸರಿಯಾಗಿ ಚಂದ್ರಶೇಖರರಾಯ ದಂಪತಿಗಳೂ ಬಂದರು. ಎಲ್ಲರೂ ನಿಲ್ದಾಣಕ್ಕೆ ಹೊರಟೆವು. ಮ್ಯಾನೇಜರರು ಮತ್ತಿತರರು ಹನ್ನೊಂದು ಘಂಟೆಗೆ ಅಲ್ಲಿಗೆ ಬಂದರು. ನಾನು ದೂರ ನಿಂತಿದ್ದೆ. ಇವರು ಈಗ ಮ್ಯಾನೇಜರರಲ್ಲವೇ? ಕೈ ಹೂ ಮಾಲೆಯೊಂದಿಗೆ, ಅವರ ಜೋಡಿ ಇದ್ದರು. ಅಷ್ಟರಲ್ಲಿ ಮ್ಯಾನೇಜರರು ನಾವಿದ್ದ ಸ್ಥಳವನ್ನು ಸಮೀಪಿಸಿದರು. ಎಲ್ಲರಂತೆ ನಾನೂ ಅವರನ್ನು ನೋಡಿದೆ. ಎದೆ ದಡದಡವೆಂದು ಹೊಡೆದುಕೊಳ್ಳ ಲಾರಂಭಿಸಿತು. ಕಾಲುಗಳು ನಡುಗಲಾರಂಭಿಸಿದವು. ಅಹುದು ಹೇಮಾ! ಅಹುದು, ಹದಿನೈದು ವರುಷಗಳ ಹಿಂದೆ ನನ್ನೊಡನೆ ಆಡಿ ನಲಿದು, ನನ್ನಿಂದ ಬಲವಂತದಿಂದ ದೂರಾಗಿದ್ದ ಆನಂದನೇ ಮ್ಯಾನೇಜರನಾಗಿದ್ದ.

ನನ್ನ ಕಣ್ಣುಗಳು ಅವನ ಸುತ್ತು ತಿರುಗಲಾರಂಭಿಸಿದವು. ಅದರಂತೆ ಅವನ ಕಣ್ಣುಗಳು ಎಲ್ಲರನ್ನೂ ನೋಡಿ ನನ್ನ ಕಡೆ ತಿರುಗಿದವು. ಆಗ ನನಗೆಲ್ಲವೂ ಅರ್ಥವಾಯಿತು. ಅಂದು ಸಿನಿಮಾಕ್ಕೆ ಹೋದ ದಿನ ನನ್ನನ್ನವರು ಆನಂದನಿಗೆ ತೋರಿಸಿದಾಗಲೇ ಅವನು ನನ್ನನ್ನು ಗುರ್ತಿಸಿದ. ನಾನು ಸಂಸಾರದಲ್ಲಿ ಕಷ್ಟಕ್ಕೀಡಾಗಬಾರದೆಂದು, ಅವರ ಕೆಲಸವನ್ನು ಉಳಿಸುವ ದಲ್ಲದೇ ತನ್ನ ಸ್ಥಳಕ್ಕೆ ಆರಿಸಿ, ತಾನು ಇಲ್ಲಿಯೇ ಇದ್ದಲ್ಲಿ ಕಾಲ ಪ್ರವಾಹದಲ್ಲಿ ನಮ್ಮ ಹಿಂದಿನ ಕಥೆ ತಿಳಿದು ಭಯಂಕರ ಆಪತ್ತು ಒದಗಬಾರದೆಂಬ ಸದುದ್ದೇಶದಿಂದ ತನ್ನನ್ನು ಬದಲೀ ಮಾಡಿಸಿಕೊಂಡಿರುವನು.

ಎಲ್ಲರೂ ನಗುಮೊಗದಿಂದ ಬೀಳ್ಕೊಡುವಾಗ, ನಾನು ಮಾತ್ರ ಕಣ್ಣೀರಿಡುತ್ತಲಿದ್ದೆನೆಂದು ನಿನ್ನೊಡನೆ ಹೇಳಲು ನಾಚಿಕೆ ಏಕೆ ಹೇಮಾ? ಗಾಡಿ ಹೊರಟು ಹೋದನಂತರ ನಾನೂ ಚಂದ್ರಶೇಖರರಾಯರ ಹೆಂಡತಿಯೂ

ಒಂದು ಕಾರಿನಲ್ಲಿ ಬಂದೆವು. ಮಾತಿನ ನಡುವೆ ಅವರು "ಸಣ್ಣ ವಯಸ್ಸಿನಲ್ಲಿ ಈ ಮ್ಯಾನೇಜರರು ಯಾರೋ ಓರ್ವ ಬಡ ಹೆಣ್ಣಿನಲ್ಲಿ ಆಶೆ ಇಟ್ಟಿದ್ದರಂತೆ. ಧನವಂತರಾದ ಅವರ ತಂದೆ ತಾಯಿಗಳು ಅವರ ಉದ್ದೇಶಕ್ಕೆ ಕಲ್ಲು ಹಾಕಿದರಂತೆ. ಆದಕ್ಕೆಂದು ಅವರು ಇನ್ನು ಮದುವೆಯೇ ಮಾಡಿಕೊಳ್ಳುವುದಿಲ್ಲವೆಂದಿದ್ದಾರಂತೆ" ಎಂದು ಹೇಳಿದರು. ಆ ಮಾತುಗಳನ್ನು ಕೇಳಿ ನನ್ನ ಮನಸ್ಸಿನ ವೇದನೆಯನ್ನು ಊಹಿಸಿಕೊಳ್ಳಲು ನಿನಗೇ ಬಿಟ್ಟಿರುವೆನು.

ಇದೆಲ್ಲವನ್ನೂ ಅರಿಯದ ಇವರು, ತಮ್ಮ ಅದೃಷ್ಟದಿಂದಲೂ, ಸಾಮರ್ಥ್ಯದಿಂದಲೂ, ಎಲ್ಲ ಕಷ್ಟಗಳೂ ಕೊನಗಂಡವೆಂದು ಬಡಾಯಿ ಕೊಚ್ಚುತ್ತಿದ್ದಾರೆ. ಇಷ್ಟೆಲ್ಲಕ್ಕೂ ಕಾರಣ ಯಾರೆಂಬುದು ನಮ್ಮಿಬ್ಬರಿಗೆ ಮಾತ್ರ ತಿಳಿದಿದೆ ಹೇಮಾ.

— ಜಯಾ.



# ದೈವ ಲೀಲೆ



ನಮ್ಮೂರಿಗೆ ಓರ್ವ ಸನ್ಯಾಸಿಗಳು ಬಂದಿದ್ದರು. ಅವರ ಮುಖದ ಮೇಲೆ ಬಹಳ ವರ್ಚಸ್ಸು. ಭಕ್ತರ ಮನೋಗತವನ್ನು ಅರಿತು, ಅವರವರ ಸೇವೆಯನ್ನು ಕೈಕೊಂಡು ದಲಿತ ದೀನರ, ಉದ್ಧಾರಕ್ಕೆಂದು ಒಂದು ಅನಾಥ ಆಶ್ರಮವನ್ನು ಕಟ್ಟಿಸಿ ಅಲ್ಲಿ ದಿಕ್ಕುಕಾಣದ ಅನಾಥಮಕ್ಕಳ ಆರೈಕೆ, ಪೋಷಣೆ ಯಲ್ಲಿ ತೊಡಗಿದ್ದರು.

ಮೊದಮೊದಲಿಗೆ ಅವರು ಹೆಚ್ಚು ಮಾತನಾಡುತ್ತಿದ್ದರು. ಆದರೆ ಈಚೆಗೆ ಮೌನವೇ ಮಾನವನ ಉನ್ನತಿಗೆ, ಮೌನವೇ ಯೋಗ್ಯ ಸಾಧನ ವೆಂದು ಅವರು ತಿಳಿದಿದ್ದರು ಆದರೆ ಪ್ರತಿ, ಆದಿತ್ಯವಾರ ಅವರು ತಮ್ಮ ಮೌನವನ್ನು ಬಿಟ್ಟುಕೊಟ್ಟು ಭಕ್ತರೊಂದಿಗೆ ಮಾತುಕತೆಗಳನ್ನಾಡುವ ಕ್ರಮ ವನ್ನಿಟ್ಟುಕೊಂಡಿದ್ದರು.

ಅಂದು ಭಾನುವಾರ. ನನ್ನ ಮೇಲೆ ಅವರಿಗೆ ಹೆಚ್ಚಿನ ಮಮತೆ. ಅಂದು ನನ್ನೊಡನೆ ಮಾತನಾಡುವಾಗ ಅಲ್ಲಿ ಯಾರೂ ಇರಲಿಲ್ಲ. ಅವರು ಒಮ್ಮಿಂದೊಮ್ಮೆ "ಆಹಾ! ವಿಧಿಯ ವೈಚಿತ್ರ್ಯವನ್ನು ಅರಿಯುವುದು ಅಸಾಧ್ಯ. ಆದೇ ವಿಧಿಯೇ ರಾಣಿರೂಪದಲ್ಲಿ ಬಂದಿರಬಹುದು'' ಎಂದು ನುಡಿದರು. ಒಗಟಿನಂತಿದ್ದ ಇವರ ಮಾತಿನ ಅರ್ಥ ನನಗಾಗಲಿಲ್ಲ. ವಿವರವಾಗಿ ತಿಳಿಸ ಬೇಕೆಂದು ಕೇಳಿಕೊಂಡೆ "ಅದೊಂದು ದೊಡ್ಡ ಕತೆ" ಎಂದರು. "ನಮ ಗದನ್ನು ತಿಳಿಸಿ, ಅನುಗ್ರಹಿಸಿ" ಎಂದು ನಾನು ಕೇಳಿಕೊಂಡೆ.

"ನೋಡು. ಈರ್ಷೆ, ಜಿಗುಪ್ಸೆ, ಮಾನವರಲ್ಲಿ ನೆಲೆಸಿರುವ ಸಹಜ ಸ್ವಭಾವಗಳು ಆದರೆ ನಾವು ಮಾಡುವ ಪ್ರತಿಯೊಂದು ಕೆಲಸಕ್ಕೂ ವಿಧಿಯ ಪ್ರೇರಣೆ, ಆತನ ಕೈವಾಡವಿದ್ದೇ ಇರುತ್ತದೆ ಕೆಲವರು ಅದನ್ನು ಆಕಸ್ಮಿಕ ವೆಂದು ದೇವರ ಇರವಿಕೆಯನ್ನು ತೆಗಳುವರು. ಆಸ್ತಿಕರು ಎಲ್ಲವೂ ದೈವ ಲೀಲೆಯೆಂದು ತೃಪ್ತಿಹೊಂದಿ ದೇವರನ್ನು ನಂಬುವರು. ಎಲ್ಲವೂ ನಾವು ನೋಡುವ ದೃಷ್ಟಿಯನ್ನು ಅನುಸರಿಸುತ್ತದೆ." ಎಂದು ಸುಮ್ಮನಾದರು.

"ಸ್ವಾಮೀ! ನಿಮ್ಮ ಈ ವಿವರಣೆ ನನಗೆ ತಿಳಿಯಲಿಲ್ಲ. ಇದಕ್ಕೆ ನಿದರ್ಶನ ಬೇಡವೇ? " ಎಂದು ಕೇಳಿದೆ.

"ಆಗಲಿ. ನಡೆದುಹೋದ ಒಂದು ಸಂದರ್ಭವನ್ನೇ ನಾನು ನಿನಗೆ ವಿವರಿಸುತ್ತೇನೆ. ಸುಮಾರು ಇಪ್ಪತ್ತು ವರುಷಗಳಹಿಂದೆ ಪಾಣಿ ನಾಟಕ ಕಂಪನಿ ಯೆಂಬ ಹೆಸರಾಂತ ಸಂಸ್ಥೆ ಇತ್ತು. ಅದರ ಯಜಮಾನನು ರಾಜರಾಯನು ಬಹಳ ಒಳ್ಳೆಯವ. ಹೆಣ್ಣೆಂದರೆ ಬಲು ದೂರ ಸರಿದುನಿಂತು, ತನ್ನ ಕಂಪನಿ ಯಲ್ಲಿ ಯಾವಬಗೆಯ ಹೇಯ, ಅನೀತಿ ವರ್ತನೆಗಳಿಗೆ ಎಡೆಗೊಡುತ್ತಿರಲಿಲ್ಲ. ಕಂಪನಿಯ ನಟನಟಿಯರೂ ಈತನಲ್ಲಿ ವಾತ್ಸಲ್ಯವನ್ನು ತಾಳಿ ಹಿರಿಯ ಅಣ್ಣ ನಂತೆ ನಡೆದುಕೊಳ್ಳುತ್ತಿದ್ದರು. ಬಳ್ಳಾರಿಯ ಮುಕ್ಕಾಮಿನಲ್ಲಿ ಜೀವನ ಎಂಬ ನಾಟಕ ಪ್ರದರ್ಶಿಸಲ್ಪಡುತ್ತಿತ್ತು. ಬಹಳ ದಿನಗಳಿಂದ ಈ ನಾಟಕದಲ್ಲಿ ಪಾತ್ರ ವಹಿಸುತ್ತಲಿದ್ದ ನಾಯಕಿ ಪಾತ್ರಧಾರಿ ನಾಟಕದ ಕೊನೆಯ ರಂಗದಲ್ಲಿ ಹೃದಯವಿಕಾರದ ಬೇನೆಯಿಂದ ಮೃತಳಾದಳು. ಇದರಿಂದ ಕಂಪನಿಯ ಆಟವನ್ನು ಕೆಲ ಸಮಯ ನಿಲ್ಲಿಸಬೇಕಾಯಿತು. ಕಂಪನಿಯ ಒಡೆಯನಾದ ರಾಜರಾಯನು ಆಲೂರ ಉದ್ಯಾನವನದಲ್ಲಿ ಕುಳಿತಿರುವಾಗ ರಾತ್ರಿ ಎಂಟರ ಸಮಯಕ್ಕೆ ಸರಿಯಾಗಿ, ಕತ್ತಲಲ್ಲಿ ಯೋಚನೆಯಲ್ಲಿ ಮುಳುಗಿದ ತನ್ನ ಹತ್ತಿರ ಯಾರೋ ಹೊಸಬರು ಬರುತ್ತಿರುವುದನ್ನು ಕಂಡ. ಹೆಣ್ಣೆಂಬುದನ್ನರಿತು ಚಕಿತನಾದ. ಎದ್ದುನಿಂತು "ನೀನಾರು?" ಎಂದ.

"ಭಯಪಡಬೇಡಿ. ನಾನೋರ್ವ ಅನಾಥೆ ಬಡವಿ ನನಗಾರೂ ದಿಕ್ಕಿಲ್ಲ. ನಿಮ್ಮ ನಾಟಕಗಳನ್ನು ನೋಡಿದ್ದೇನೆ. ನನಗೆ ಚಿಕ್ಕಂದಿನಿಂದಲೂ ನಾಟಕಗಳೆಂದರೆ ಬಲು ಪ್ರೀತಿ. ಶಾಲೆಯಲ್ಲಿ ಓದುತ್ತಿರುವಾಗ ಚಿಕ್ಕಚಿಕ್ಕ ನಾಟಕಗಳಲ್ಲಿ ಪಾತ್ರ ವಹಿಸಿದ್ದೇನೆ. ನಿಮ್ಮ ನಾಟಕಗಳು ನನಗೆ ಬಲು ಹಿಡಿಸಿವೆ. ಅದರಲ್ಲಿ ನಿಮ್ಮ ಗುಣದ ಬಗ್ಗೆಯೂ ಕೇಳಿರುವೆನು. ಹೆಣ್ಣಿನ ಮಾನದ ಮಾರಾಟಕ್ಕೆ ನಿಂತಿರುವ ಕಂಪನಿಗಳಲ್ಲಿ ಸೇರುವುದು ನನಗೆ ಇಷ್ಟ ವಿಲ್ಲ. ನಿಮಗೆ ಪಾರ್ಟು ಮಾಡಲು ಓರ್ವ ಹೆಣ್ಣು ಬೇಕೆಂದು ಕೇಳಿದೆ ಆದರೆ ನಿಮ್ಮನ್ನು ಕಂಪನಿ ಮನೆಯಲ್ಲಿ ಕಾಣುವುದು ನನಗೇಕೋ ಕಷ್ಟವೆನಿ ಸಿತು. ಇಲ್ಲಿಗೆ ತಾವು ಬರುವುದನ್ನು ದಿನವೂ ಕಂಡಿರುವೆನು. ನೀವು ನನಗೆ ಆಶ್ರಯವನ್ನು ಕೊಡಬೇಕು" ಎಂದು ಕೇಳಿಕೊಂಡಳು

ನಾಟಕ ಕಂಪನಿಯ ಯಜಮಾನರು ಜನರ ಮನಸ್ಸನ್ನು ಅರಿಯುವ ಕುಶಲಮತಿಗಳೆಂಬುದು ನಿಜ. ದೀಪದ ಬೆಳಕಿನಲ್ಲಿ ಅವಳ ಮುಖವನ್ನು ನೋಡಿ, ಅವಳಲ್ಲಿ ಅಡಗಿದ್ದ ದೈನ್ಯತೆಯನ್ನು ಆರ್ತತೆಯನ್ನು ಕಂಡು, ಅವಳು ಚೆಲುವೆಯಾದುದರಿಂದಲೂ ಸುಶಿಕ್ಷಿತೆಯಾದುದರಿಂದಲೂ ತನ್ನ ಕಂಪನಿಯಲ್ಲಿ

ಅವಳಿಗೆ ಸ್ಥಾನವಿತ್ತರೆ ತಪ್ಪಾಗಲಾರದೆಂದು ಭಾವಿಸಿ, ಅವಳೊಂದಿಗೆ ತನ್ನ ಬಿಡಾರಕ್ಕೆ ಹೊರಟ. ರಾಜಾರಾಯನು ಉತ್ತಮ ಕಲಾವಿದ. ಕಲಾವಿದರನ್ನು ತಯಾರಿಸುವ ವಿದ್ಯೆಯನ್ನು ಚೆನ್ನಾಗಿ ಕಲಿತಿದ್ದನಾದುದರಿಂದ ಒಂದು ವಾರ ದೊಳಗಾಗಿ, ರಾಣಿಯು ( ಹೊಸದಾಗಿ ಬಂದವಳ ಹೆಸರು ) 'ಜೀವನ' ನಾಟಕದಲ್ಲಿ ಮುಖ್ಯ ಪಾತ್ರ ವಹಿಸಲು ಅಣಿಯಾದಳು.

ರಾಣಿಯದು ಬಲು ಸರಳ ಸ್ವಭಾವ. ನಾಟ್ಯ ಕಲೆಗೆ ಹೇಳಿ ಮಾಡಿಸಿ ದಂತಿತ್ತು ಅವಳ ಚೆಲುವು, ಹಾವ, ಭಾವ, ಮತ್ತು ಇತರ ಗುಣಗಳು ಅವಳಿನ್ನೂ ಚಿಕ್ಕವಳು; ಮೇಲೆ ಜಾಣೆ, ವಿದ್ಯಾವಂತೆ. ಯಾರೂ ಮುಡಿಯದ ಹೂ. ಆದುದರಿಂದಲೇ ಒಡೆಯನಾದ ರಾಜಾರಾಯನು ತಾನಿಷ್ಟು ದಿನವೂ ಬ್ರಹ್ಮಚಾರಿಯಾಗಿದ್ದುದರಿಂದ ದೇವರೇ ಇಂತಹ ಬಾಲೆಯನ್ನು ತನಗಾಗಿ ಒದಗಿಸಿರುವನೆಂದು ಹಿಗ್ಗಿ, ಅವಳಿಗೆ ಹೆಚ್ಚು ದಕ್ಷತೆಯಿಂದ ವಿದ್ಯೆ ಕಲಿಸಿದ. ಕಂಪನಿಯಲ್ಲಿ ಖಳನಾಯಕನ ಪಾತ್ರವನ್ನು ವಹಿಸುತ್ತಿದ್ದ ಶೇಖರನೂ, ಉಪ–ನಾಯಕನ ಪಾತ್ರವನ್ನು ಮಾಡುತ್ತಿದ್ದ ಸುಂದರರೂ ಈ ಹೊಸ ಹೆಣ್ಣನ್ನು ತಾವು ಸ್ವಾಧೀನ ಪಡೆಯಿಸಿಕೊಳ್ಳಬೇಕೆಂದು ಬಯಸಿದರು. ಇದರ ಬಗ್ಗೆ ಯಜಮಾನನಿಗೆ ತಿಳಿಯದಂತೆ ಅವರಿಬ್ಬರಲ್ಲಿ ತರ್ಕವಿತರ್ಕ ಗಳಾದವು. ಮೂಢರಾದ ಈ ಯುವಕರಿಗೆ ಒಡೆಯನ ಆಶೆ, ಆಕಾಂಕ್ಷೆ ಗಳನ್ನರಿಯಲು ಅಸಾಧ್ಯವಾಯಿತು. ದಿನಗಳು ಉರುಳಿದಂತೆಲ್ಲ ಇವರ ಮನೋವಿಕಾರವು ಹೆಚ್ಚಾಗತೊಡಗಿತು. ತಮ್ಮ ಕೆಲಸ ಕೈ ಗೂಡಲು ಯಜಮಾನನನ್ನು ಮರೆಹೋಗುವುದೆಂದು ಇಬ್ಬರೂ ( ಒಬ್ಬರಿಗೊಬ್ಬರಿಗೆ ತಿಳಿಯದಂತೆ) ನಿಶ್ಚಯಿಸಿಕೊಂಡರು.

ಈ ವಿಷಯವಾಗಿ ತನ್ನನ್ನು ಕಾಣಲು ಪ್ರತ್ಯೇಕವಾಗಿ ಬಂದ ಸುಂದರ, ಶೇಖರರನ್ನು ರಾಜಾರಾಯನು ದಂಡಿಸಲಿಲ್ಲ. ತಾನು ಆ ಹೆಣ್ಣನ್ನು ಮೋಹಿಸಿ ರುವೆನೆಂದು ಹೇಳಿದರೆ, ಅವರು ತನ್ನ ಕಂಪನಿಯನ್ನು ತೊರೆದರೆ ತನ್ನ ವಿಪತ್ಪರಂಪರೆ ಹೆಚ್ಚುವುದೆಂದು ಬಗೆದು, ಇವರಿಬ್ಬರಲ್ಲಿ ಮೂಡಿರುವ ವೈಷಮ್ಯವನ್ನು ಅವರ ಅಳಿವಿಗೆ ಕಾರಣವಾಗುವಂತೆ ಉಪಯೋಗಿಸಬೇಕೆಂದು ಭಾವಿಸಿ, ಸುಂದರ, ಶೇಖರರಿಗೆ ಪ್ರತ್ಯೇಕವಾಗಿಯೇ ಕಿವಿಯಲ್ಲಿ ಗುಟ್ಟಿನ ಮಾತನ್ನು ಹೇಳಿಕಳುಹಿದ.

× × ×

ಅಂದು 'ಪ್ರಲ್ಹಾದ' ನಾಟಕ. ನಾಟಕವು ಯಶಸ್ವಿಯಾಗಿ ನಡೆದಿತ್ತು. ನಾಟಕಗೃಹ ಕಿಕ್ಕಿರಿದು ತುಂಬಿತ್ತು. ಅಂದು ರಾಣಿಯು ಲೀಲಾವತಿ ಪಾತ್ರವನ್ನೂ, ಸುಂದರ ಹಿರಣ್ಯಕಶ್ಯಪುನ ಪಾತ್ರವನ್ನೂ, ಶೇಖರ ನರಸಿಂಹನ ಪಾತ್ರವನ್ನೂ ವಹಿಸಿದ್ದರು. ಕೊನೆಯ ಪ್ರವೇಶ. ಹಿರಣ್ಯಕಶ್ಯಪುವಿನ ಸಾವಿನ ದೃಶ್ಯ. ಪ್ರೇಕ್ಷಕರಲ್ಲಿ ನಿಶ್ಯಬ್ದತೆ ಆವರಿಸಿತ್ತು. ನಾಯಕನು ಮಗನಾದ ಪ್ರಲ್ಹಾದನನ್ನು ತನ್ನ ಸ್ವಾಮಿ ನಾರಾಯಣನನ್ನು ತೋರೆಂದು ಕೇಳುವನು. ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ಆ ದೇವದೇವನಿರುವನೆಂಬುದನ್ನು ಆ ಬಾಲಕನು ತಿಳಿಹೇಳಲು, ಹಿರಣ್ಯಕಶಿಪು "ನಿನ್ನ ಆ ನಾರಾಯಣನು ಇಲ್ಲಿದ್ದರೆ ಬರಲಿ" ಎಂದು ಕಂಭವನ್ನು ಕಾಲಿನಿಂದ ಒದೆಯುವನು. ಕಂಭದಿಂದ ನರಸಿಂಹ ವೇಷಧಾರಿ ಶೇಖರ ಹೊರಬಂದು ಸುಂದರನನ್ನು ತೊಡೆಯ ಮೇಲೆ ಹಾಕಿಕೊಂಡು ಕುಳಿತ ಅವನ ಟೊಂಕದಲ್ಲಿ ಏನೋ ಚುಚ್ಚಿದಂತಾಯಿತು. ಅದನ್ನು ಲಕ್ಷಿಸದೆ ಆವೇಶದಿಂದ ಸುಂದರನ ಕರುಳನ್ನು ತನ್ನ ಉಗುರುಗಳಿಂದ ನಿಜವಾಗಿಯೇ ಬಗೆದು ಬಿಟ್ಟ. ರಕ್ತವು ಚಿಮ್ಮ ತೊಡಗಿತು "ಅಯ್ಯೋ" ಎಂದು ಸುಂದರ ಕೆಳಗೆ ಬಿದ್ದು ಮೃತನಾದ ಚಿಮ್ಮುವ ರಕ್ತವು ನಿಜವೆಂದು ಭಾವಿಸಿ ಜನರಲ್ಲಿ ಕೋಲಾಹಲ ಉಂಟಾಯಿತು. ಮರುಕ್ಷಣದಲ್ಲಿಯೇ "ಅಯ್ಯೋ ಸಂಕಟ! ಸತ್ತೆ." ಎಂದು ಶೇಖರನು ಒದರಿಕೊಳ್ಳುತ್ತ ಧೊಪ್ಪೆಂದು ಸುಂದರನ ಕಳೇಬರದ ಮೇಲೆ ಬಿದ್ದ, ಅವನ ಪ್ರಾಣಪಕ್ಷಿಯು ಹಾರಿ ಹೋಯಿತು.

ಈ ಗಡಿಬಿಡಿಯಲ್ಲಿ ಎಲ್ಲೆಲ್ಲಿಯೂ ಚೀತ್ಕಾರವೇ. ಸ್ಟೇಜಿನಮೇಲಿದ್ದ ರಾಣಿ ಈ ದಾರುಣ ದೃಶ್ಯವನ್ನು ಕಂಡು ಗಾಬರಿಗೊಂಡು ಮುಂದೆ ಸರಿಯುವುದಕ್ಕೂ, ಪರದೆ ಎಳೆಯುವವನ ಹಿಡಿತ ತಪ್ಪಿ ಭಾರವಾದ ಪರದೆ ರಾಣಿಯ ಮೇಲೆ ಬೀಳುವದಕ್ಕೂ ಸರಿಹೋಗಿ, "ನಾಸತ್ತೇ" ಎಂದು ಚೀರುತ್ತ ಅವಳೂ ಮೃತಳಾದಳು.

ಅನಂತರ ಹೇಳುವುದೇನು? ವೀಣಾ ನಾಟಕ ಮಂಡಳಿ ವೀಣೆಯ ತಂತಿಗಳು ಒಂದೇ ಏಟಿಗೆ ಹರಿದುಹೋದವು. ದೈವಲೀಲೆಯಿಂದ ಒಂದರಘಳಿಗೆಯಲ್ಲಿ ಮೂರು ಜೀವಗಳು ಮೇಲೆ ಹಾರಿಹೋದವು

ಸುಂದರ, ಶೇಖರರು ಮೃತರಾದುದಕ್ಕೆ ಕಾರಣ ನಿಮಗೆ ಹೇಳುವೆನು. ರಾಜಾರಾಯನು ಹೇಳಿಕೊಟ್ಟ ಹಂಚಿಕೆಯಮೇರೆಗೆ, ಶೇಖರ ಸುಂದರನನ್ನು

ವಿಷಪೂರಿತ ನಖಗಳಿಂದ ಕರುಳುಗಳನ್ನು ಹೊರಗೆ ಎಳೆದ: ಸುಂದರನು ವಿಷದ ಸೂಜಿಯಿಂದ ಶೇಖರನ ಶರೀರದಲ್ಲಿ ಗಾಯಮಾಡಿದ. ಇಂತಹ ಸಾಧನಗಳನ್ನು ರಾಜರಾಯನೇ ಒದಗಿಸಿದ್ದನಂತೆ. ರಾಣಿಯನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ಹಂಚಿಕೆ ಅವನನ್ನು ಈ ಸಾಹಸಕ್ಕೆ ಪ್ರೇರೇಪಿಸಿರಬೇಕು

ಇದೆಲ್ಲವೂ ನಡೆದಾಗ ರಾಜರಾಯ ನಾಟಕಗೃಹದಿಂದ ಮಾಯವಾದನಂತೆ. ಇಲ್ಲಿಯವರೆಗೆ ಅವನೆಲ್ಲಿರುವನೆಂಬುದು ತಿಳಿದುಬರಲಿಲ್ಲ. ಎಂದು ಸ್ವಾಮಿಗಳು ತಮ್ಮ ಕತೆ ಹೇಳುವುದನ್ನು ಮುಗಿಸಿದರು

"ಈ ರಹಸ್ಯ ನಿಮಗೆ ಹೇಗೆ ತಿಳಿಯಿತು, ಸ್ವಾಮಿಗಳೇ?" ಎಂದು ನಾನು ಕೇಳಿದೆ

ಸ್ವಾಮಿಗಳು ಎದ್ದುನಿಂತು, ಈ ಜಡ ದೇಹಕ್ಕೆ ಪೂರ್ವಾಶ್ರಮದಲ್ಲಿ 'ರಾಜ' ಎಂಬ ಹೆಸರಿತ್ತು. ಇನ್ನು ನನ್ನನ್ನು ನೀವುಗಳ್ಯಾರೂ ಹುಡುಕಬೇಡಿ ಈ ಆಶ್ರಮಕ್ಕೆ "ವೀಣಾಶ್ರಮ"ವೆಂಬ ಹೆಸರಿಟ್ಟು ನೀವೇ ಕೆಲಸ ಮುಂದರಿಸಿ ನೀವು ಎಷ್ಟು ಹುಡುಕಿದರೂ ನಾನು ನಿಮಗೆ ಸಿಗಲಾರೆ" ಎಂದು ಅಲ್ಲಿಂದ ಮಾಯವಾದವರ ಶವವನ್ನು ಮೂರು ದಿನಗಳನಂತರ ಊರ ಜನರು ಕಂಡು ಅವರ ಮರಣಕ್ಕೆ ದುಃಖಿಸಿದರಂತೆ.

---



## ನಮ್ಮ ಮಾಲೆಯ ಪುಸ್ತಕಗಳ ಬಗ್ಗೆ ಅಭಿಪ್ರಾಯಗಳು

**ಇವೆತ್ :** ಶ್ರೀ ಪಿ. ವೆಂಕೋಬಾಚಾರ್ಯ ಬೆಲೆ ೧-೧೨-೦

ಹೆಣ್ಣಿನ ಕಣ್ಣೀರ ಬಾಳನ್ನು ತೋರಿಸಿ ಓದುಗರ ಸಹಾನುಭೂತಿಯನ್ನು ಗಳಿಸುವ
ಈ ಕಾದಂಬರಿಯು ಫ್ರೆಂಚ್ ಬಂಡವಳಶಾಹಿ ಸಮಾಜದ
ನೀತಿ ಧರ್ಮಗಳನ್ನು ಬಯಲಿಗೆಳೆದಿದೆ.

—ಚಿತ್ರಗುಪ್ತ

**ಸೈಮನ್ನನ ತಂದೆ:** (ಮೋಪಾಸಾನ ಮತ್ತು ಇತರ ಕತೆಗಳು)
ವಿವಿಧ ಲೇಖಕರು ಬೆಲೆ ೨-೮-೦

ಈ ಕೃತಿಯು ಕನ್ನಡ ಅನುವಾದ ಸಾಹಿತ್ಯಕ್ಕೆ ಒಂದು ಪ್ರಮುಖ ಕಾಣಿಕೆ.

—ಚಿತ್ರಗುಪ್ತ

ಈ ಸಂಗ್ರಹದ ಕತೆಗಳು ತುಂಬಾ ಕಲಾಪೂರ್ಣವಾಗಿವೆ.

—ಕಲಿಯುಗ

**ಪೂರ್ಣಿಮಾ:** (ಸಂಸಾರಚಿತ್ರಗಳು-ಪತ್ರರೂಪದಲ್ಲಿ)
ಶ್ರೀ ತಿ. ಶಿದ್ದಪ್ಪ ಸ. ಸಂಪಾದಕರು ನವಯುಗ,
ಬೆಲೆ ಸಾ. ೧-೪-೦ ಉ. ೨-೪-೦

ವಿಚಾರ-ವಿಮರ್ಶೆಗಳಿಂದ ಕೂಡಿದ ಪ್ರಣಯ ಪತ್ರಗಳು ವಿರಳ.
ಈ ದೃಷ್ಟಿಯಿಂದ ಈ ಕೃತಿಯ ಬೆಲೆ ಅಮೂಲ್ಯ.

—ಕಥಾವಳಿ

ಇದರ ಭಾಷೆ ವತ್ತು ಪತ್ರಗಳು ಸುಂದರವಾಗಿರುವವು. ಪತ್ರದ್ವಾರ ಕತೆ
ಹೇಳುವ ಈ ಪುಸ್ತಕ ಕನ್ನಡಕ್ಕೆ ಒಳ್ಳೇ ಕಾಣಿಕೆ.

—ವಿಶಾಲ ಕರ್ನಾಟಕ

**ರುಕ್ಮಿಣಿ ಮತ್ತು ಕಾಂತಂ ಕತೆಗಳು:** (ಕಾದಂಬರಿ)
ಶ್ರೀ ಪಿ. ವೆಂಕೋಬಾಚಾರ್ಯ, ಬೆಲೆ ಸಾ. ೧-೮-೦ ಉ. ೨-೦-೦

"ರುಕ್ಮಿಣಿ ಕತೆಯ ಹೆಣಿಕೆ ಬಹಳ ಚಮತ್ಕಾರವಾಗಿದೆ.. . ರುಕ್ಮಿಣಿಯ ಕತೆ ಕಣ್ಣೀರಿನ ಕತೆ-ಅವಳು ಅಕ್ಕರೆಯ ಜೀವಿ-ಅವಳ ಕಿರು ಬಾಳು ಮಲ್ಲಿಗೆಯಂತೆ ಮೃದುಲ, ನಿರ್ಮಲ, ಸರಳ, ಮತ್ತು ಸ್ವಾಭಾವಿಕ—

ಕಾಂತಂ ಕತೆಗಳು ದಾಂಪತ್ಯ ಜೀವನದ ಇನ್ನು ಬೇರೆ ಮುಖಗಳನ್ನು ನಯವಾಗಿ, ರಸವತ್ತಾಗಿ ಚಿತ್ರಿಸುತ್ತವೆ. ಓದುಗರು ಅವುಗಳ ರಸಸ್ವಾದನೆಯನ್ನು ಓದಿಯೇ ಮಾಡಿಕೊಳ್ಳಬೇಕು. ಉಳಿದ ಭಾಷೆಯಲ್ಲಿಯ ಇಂತಹ ಉತ್ತಮ ಸಾಹಿತ್ಯವನ್ನು ಶ್ರೀ ವೆಂಕೋಬಾಚಾರ್ಯರಂತೆ ಸರಿಯಾಗಿ ಅನುವಾದ ಮಾಡಿ, ಕನ್ನಡ ಸಾಹಿತ್ಯದ ಕಣಜವನ್ನು ತುಂಬಬಹುದು."

—ಡಾ. ಡಿ. ಎಸ್. ಕರ್ಕಿ, ಎಂ. ಎ., ಪಿ. ಹೆಚ್. ಡಿ.

# ಹುಬ್ಬಳ್ಳಿ ಆನಂದ ಗ್ರಂಥಮಾಲೆಯ ಹಿಂದಿನ ಪ್ರಕಟನೆಗಳು

★

| | | |
|---|---|---|
| **ಮನೋರಾಜ್ಯ :** (ಮೂರಂಕದ ನಾಟಕ) ಶ್ರೀ ರಂ. ಶ್ರೀ. ಮುಗಳಿ | | ೧-೧೨-೦ |
| **ಪುಷ್ಪಹಾರ** (ಸಾ. ಕಾದಂಬರಿ) ಶ್ರೀಮತಿ ಜಯಲಕ್ಷ್ಮೀ ಶ್ರೀನಿವಾಸನ್ | | ೧--೪-೦ |
| **ಇವೆತ್** (ಮೋಪಾಸಾನ ಕಾದಂಬರಿ) ಶ್ರೀ ಪಿ. ವೆಂಕೋಬಾಚಾರ್ಯ | | ೧-೧೨-೦ |
| **ಸೈಮನ್ನನ ತಂದೆ** (ಕತೆಗಳು) ವಿವಿಧ ಲೇಖಕರು | | ೨--೮-೦ |
| **ಪೂರ್ಣಿಮಾ .** | ಸಾ. | ೧--೪-೦ |
| (ಸಂಸಾರ ಚಿತ್ರಗಳು) ಶ್ರೀ ತಿ. ಸಿದ್ದಪ್ಪ | ಉ | ೨--೪-೦ |

## ಇದೇ ವರುಷ ಹೊರಬಂದ ಪುಸ್ತಕಗಳು [೧೯೫೩]

| | | |
|---|---|---|
| **ರುಕ್ಮಿಣಿ ಮತ್ತು ಕಾಂತಂ** ಕತೆಗಳು · | ಸಾ. | ೧--೮-೦ |
| ಶ್ರೀ ಪಿ. ವೆಂಕೋಬಾಚಾರ್ಯ | ಉ | ೨-- ೦ ೦ |
| **ಮೋಪಾಸಾನ ಓಲೆಗಳು** · | ಸಾ | ೧--೪-೦ |
| ಶ್ರೀ ಪಿ. ವೆಂಕೋಬಾಚಾರ್ಯ | ಉ. | ೨--೦-೦ |
| **ಮುಡಿಯದ ಹೂ** (ಮೋಪಾಸಾನ ಕತೆಗಳು-೩) | ಸಾ | ೦-೧೨-೦ |
| | ಉ. | ೧--೮-೦ |

## ಮುಂದೆ ಇದೇ ವರುಷವೇ ಬರಲಿರುವ ಪುಸ್ತಕಗಳು [೧೯೫೩]

| | | |
|---|---|---|
| **ಕಲ್ಪನಾ ವಿಲಾಸ** ಶ್ರೀ ಪಿ. ವೇಣುಗೋಪಾಲ | ಸಾ | ೦-೧೨-೦ |
| | ಉ. | ೧ -೮ ೦ |
| **ಪ್ರವಾದಿ** (ಗಿಬ್ರಾನರ ಪ್ರ್ರೋಫೆಟ್-Prophet) | ಸಾ | ೧--೨-೦ |
| ಶ್ರೀ ದೇಸಾಯಿ ದತ್ತಮೂರ್ತಿ | ಉ | ೨- ೦.೦ |

## ಬಿಡಿ ಮುತ್ತುಗಳು

| | |
|---|---|
| **ಗಾಯದ ನೋವು** (ಮೋಪಾಸಾನ ಕತೆಗಳು-೨) | ೧--೪-೦ |
| **ವೃಂದ** (ಸಾಮಾಜಿಕ ಕಾದಂಬರಿ) ಶ್ರೀ ಪಿ. ವೆಂಕೋಬಾಚಾರ್ಯ | ೧--೮-೦ |
| **ವಿಧಿ ತಂದ ವಧು .** (ಕಾದಂಬರಿ) ಶ್ರೀ ಪಿ ವೆಂಕೋಬಾಚಾರ್ಯ | ೧--೨-೦ |
| **ಕವನ ಸಂಗ್ರಹ:** ಶ್ರೀ ಶ್ರೀಧರ ಖಾನೋಳಕರ್ | ೧--೪ ೦ |

## ● ಹುಬ್ಬಳ್ಳಿ ಆನಂದ ಗ್ರಂಥಮಾಲೆಯ ವೈಶಿಷ್ಟ್ಯ ●

[೧] ಹೆಸರಾಂತ ಸಾಹಿತಿಗಳ ಕೃತಿಗಳು.

[೨] ವರುಷದಲ್ಲಿ ಏಳೆಂಟು ರೂಪಾಯಿಗಳ ಸುಂದರ ನಾಲ್ಕು ಪುಸ್ತಕಗಳು

**ಸಾಮಾನ್ಯ ಪ್ರತಿ . ರೂ. ೫--೮-೦ ಉತ್ತಮ ಪ್ರತಿ ರೂ. ೬-೮-೦**

ಗವಳೀಗಲ್ಲಿ, ಹುಬ್ಬಳ್ಳಿ. } **ಪಿ. ವೆಂಕೋಬಾಚಾರ್ಯ** ಬಿ. ಎ. ಬಿ. ಟಿ.